# ನಿನ್ನ ತಂದೆ-ತಾಯಿ

ಹಾಗು

# ನಿನ್ನ ಹುಟ್ಟು



# ನಿನ್ನ ತಂದೆ–ತಾಯಿ ಹಾಗು ನಿನ್ನ ಹುಟ್ಟು

ತಾರುಣ್ಯದ ಹೊಸ್ತಿಲಲ್ಲಿರುವ
ಹುಡುಗ ಹುಡುಗಿಯರಿಗೆ ಆರೋಗ್ಯಕರ ಲೈಂಗಿಕ ಜ್ಞಾನ



ಲೇಖಕರು :
**ಎಚ್. ಜೆ. ನೊರೊನ್ಹಾ, ಜೆ. ಸ**



**ಮೂಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ–೧**

ಪ್ರಕಾಶಕರು :
ಮನೋಹರ ಘಾಣೇಕರ,
ಸಮಾಜ ಪುಸ್ತಕಾಲಯ,
ಧಾರವಾಡ.



ಬೆಲೆ : ರೂ. ೧.೦೦



ಮುದ್ರಕರು :
ರವೀಂದ್ರ ಘಾಣೇಕರ,
ಬಿ. ಎ., ಎಲ್. ಪಿ. ಟಿ.
ಪ್ರತಿಭಾ ಮುದ್ರಣ,
ಧಾರವಾಡ.

# ಪರಿವಿಡಿ

230

# ಮೊದಲ-ಮಾತು

ಈ ವರೆಗೆ ನಾನೂ ನೀವೂ ಅಪರಿಚಿತ ವ್ಯಕ್ತಿಗಳು. ನಿಮ್ಮ ಹೆತ್ತವರು ಎಲ್ಲಿ ವಾಸಿಸುವರು, ನೀವು ಮನೆಯಲ್ಲಿರುವಿರಾ, ಯಾವ ದರ್ಜೆ ಮತ್ತು ಯಾವ ಶಾಲೆಯಲ್ಲಿ ನೀವು ಓದುತ್ತಿರುವಿರಿ, ಯಾವ ಉದ್ಯೋಗ ಕೈಕೊಂಡಿರುವಿರಿ ? ಇದಾವುದೂ ನನಗೆ ಗೊತ್ತಿಲ್ಲ. ನಿಮ್ಮ ಹೆಸರನ್ನೂ ಕೂಡ ನಾನು ಅರಿಯೆ. ಆದರೂ ಈ ಪುಸ್ತಕದ ಮೂಲಕ ಹೇಗೆ ಒಬ್ಬ ಪ್ರಾಯಸ್ಥ ಮಿತ್ರನು ತನ್ನ ಎಳೆಪ್ರಾಯದ ಸ್ನೇಹಿತರೊಡನೆ ಮಾತನಾಡುವನೋ, ಹಾಗೆಯೇ ನಾನೂ ನಿಮ್ಮೊಡನೆ ಮಾತನಾಡುವೆನು.

ವಾರವಾರ ನಾನು ಒಂದು ಪಟ್ಟಣದಿಂದ ಮತ್ತೊಂದು ಪಟ್ಟಣಕ್ಕೆ, ಒಂದು ಶಾಲೆಯಿಂದ ಮತ್ತೊಂದು ಶಾಲೆಗೆ ಪ್ರಯಾಣ ಮಾಡುತ್ತಾ ಇರುವೆ. ನಿಮ್ಮಂತೆಯೇ ಇರುವ ಹಲವಾರು ಮಕ್ಕಳ ಭೆಟ್ಟಿಯು ನನಗಾಗುತ್ತಿದೆ. ಅವರೆಲ್ಲರನ್ನೂ ನಾನು ಸ್ವತಃ ಅರಿಯೆನಾದರೂ ಅವರು ನನ್ನ ಮುಂದೆ ಕುಳಿತು ನನ್ನ ಮಾತುಗಳನ್ನು ಕೇಳುತ್ತಾರೆ. ಇವರು ಇಂದು ನಮಗೆ "ಅದರ ಬಗ್ಗೆ" ಹೇಳಲು ಬಂದಿರುವರೇ ? ಎಂದು ಅವರು ಯೋಚಿಸುತ್ತಿರುತ್ತಾರೆ. ಹೌದು ನಾನೂ ನಿಜವಾಗಿಯೂ ಇಂದು "ಆ ವಿಷಯವನ್ನು ಕುರಿತು" ಹೇಳಬಂದಿರುವೆ

ಈ ಪ್ರಶ್ನೆಯನ್ನು ಹಲವು ಬಾಲಕರು ಕೇಳುತ್ತಿರುವರೆಂದು ನನಗೆ ಗೊತ್ತಿದೆ. ಅವರು ಅದನ್ನು ಕೇವಲ ಕುತೂಹಲದ ದೃಷ್ಟಿಯಿಂದ ಮಾತ್ರ ಕೇಳುತ್ತಿರುವದಿಲ್ಲ. "ಅದರ ವಿಷಯ" ಅವರಿಗೆ ಅವರ ದಿನನಿತ್ಯದ ಜೀವನದಲ್ಲಿ ತುಂಬಾ ಆಂತರಿಕ ತವಕವೂ, ಅಸಹಾಯತೆಯೂ ಆಗಿ ತೊಂದರೆ ಕೊಡುತ್ತಿದೆ. ಆ ವಿಷಯ ಏನೆಂಬುದು ಈಗಲಾದರೂ ನಿಮಗೆ ಹೊಳೆಯಿತೇ ?

ತಾರುಣ್ಯದ ಹೊಸ್ತಿಲಲ್ಲಿ ಕಾಲಿಡುವಾಗ "ಅದರ ವಿಷಯ"ವಾಗಿ ಯಾರು "ನನಗೆ ನಿಜ ಸಂಗತಿಯನ್ನು ಹೇಳುವರು" ಎಂದು ಅವರು ಕೇಳಬಹುದು. ಯಾಕೆಂದರೆ ಆ ಸಮಸ್ಯೆಗಳಿಗೆ ಯೋಗ್ಯ ಪರಿಹಾರವೇನೆಂದು ಕಂಡು ಹಿಡಿಯುವ ಸಾಮರ್ಥ್ಯ ಅಥವಾ ಬುದ್ಧಿವಂತಿಕೆಯು ತಾರುಣ್ಯದಲ್ಲಿ ಅವರಲ್ಲಿ

ಅನೇಕ ವಿಧದ ಸಮಸ್ಯೆಗಳೂ, ಶರೀರದಲ್ಲಿ ಬೇರೆ ಬೇರೆ ಬದಲಾವಣೆಗಳೂ ಕಂಡು ಬರುವವು. ಆಗ ಗೊಂದಲಗೊಂಡ ತರುಣನು ಅರ್ಥಕೋಶ ವನ್ನಾಗಲೀ, ಇಲ್ಲವೇ ತನಗೆ ಬುದ್ಧಿವಾದವನ್ನು ಹೇಳಿಕೊಡುವ ಪುಸ್ತಕ ವನ್ನಾಗಲೀ ಹುಡುಕಿ ತಕ್ಕ ಜ್ಞಾನವನ್ನು ಪಡೆಯಲು ಪ್ರಯತ್ನಿಸುತ್ತಾನೆ. "ಅದರ ವಿಷಯ"ವನ್ನು ಕುರಿತು ಹೆತ್ತವರೊಡನೆ ವಿಚಾರಿಸಲು ನಾಚಿಕೆ ಪಡುವ ಯುವಕನು ತನ್ನ ಸಂಗಡಿಗರಿಂದ ಹೆಚ್ಚಿನ ವಿಷಯವನ್ನು ಪಡೆಯಲು ಅನುವಾಗುವನು. ಆದರೆ "ಅದರ ವಿಷಯ"ವಾಗಿ ಯುವಕರು ಸಂಪೂರ್ಣ ಸತ್ಯವನ್ನು ತಿಳಿಯಲು ಪ್ರಯತ್ನಿಸದೆ ತಪ್ಪು ತಿಳುವಳಿಕೆಗೆ ಗುರಿಯಾಗಿ ತಮ್ಮ ಭವಿಷ್ಯ ಜೀವನವನ್ನೇ ಕೆಟ್ಟದಾರಿಗೆ ಒಯ್ಯುವ ಅಪಾಯಕ್ಕೆ ಒಳಗಾಗಬಹುದು.

ನೂರಾರು ಮಕ್ಕಳಿಗೆ ನಾನು, ನಿಮ್ಮ ಜೀವನದಲ್ಲಿ ರಹಸ್ಯದ ಸಂಗತಿ ಗಳೆಂದೆಣಿಸುವ ವಿಷಯವಾಗಿ ನಿಮಗೆ ಯಾರಿಂದ ತಿಳಿಯಿತು ಎಂದು ಕೇಳಿದೆ. ಅದಕ್ಕೆ ಅವರು, ಆ ವಿಷಯ ತಮ್ಮ ಮಿತ್ರರಿಂದ ದೊರಕಿತು ಎಂದು ಹೇಳಿದರು. ಇದರಿಂದಾಗಿ ಅವರಿಗೆ ಯೋಗ್ಯ ಜ್ಞಾನವು, ಗುರು ಹಿರಿಯರಿಂದ ತಿಳಿದುಬಂದಿಲ್ಲವೆಂಬುದು ಸ್ಪಷ್ಟವಾಯಿತು. ಇದೇ ರೀತಿ ನಿಮಗೂ ಆಗಬಹುದು. ಆ ವಿಷಯವಾಗಿ ಯೋಗ್ಯ ಜ್ಞಾನವನ್ನು, ಯೋಗ್ಯ ಜನರಿಂದ ಪಡೆಯುವದೇ ಸರಿಯಾದದ್ದು. ಅದಕ್ಕಾಗಿಯೇ ನಾನೀಗ ಈ ಪುಸ್ತಕದಲ್ಲಿ ನಮ್ಮ ಜೀವನದಲ್ಲಿಯ ಹಲವಾರು ರಹಸ್ಯಮಯ ವಿಷಯಗಳನ್ನು, ಜನನೇಂದ್ರಿಯಗಳ ವಿಚಾರವನ್ನು ಕೂಡ ಮುಚ್ಚುಮರೆಯಿಲ್ಲದೆ ನಿಮ್ಮೊಡನೆ ಮಾತನಾಡಲು ಅನುವಾಗಿದ್ದೇನೆ.

ಫಾತಿಮಾ ಹಾಲ್
ಮಂಗಳೂರು-೨

ಎಚ್. ಜೆ. ನೊರೊನ್ಹಾ ಜೆ. ಸ.

# ನೀನು ಮತ್ತು ನಿನ್ನ ತಾಯಿ

ನಿನ್ನ ನೆರೆಹೊರೆಯ ಮನೆಯಲ್ಲಿ ಒಂದು ಮಗು ಹುಟ್ಟಿದೆಯೆಂದು ಭಾವಿಸುವಾ. ಅದನ್ನು ಕುರಿತು ನಿನ್ನ ಚಿಕ್ಕ ತಮ್ಮನು,

"ಆ ಮಗುವು ಎಲ್ಲಿಂದ ಬಂದಿತಣ್ಣಾ"

ಎಂದು ನಿನ್ನನ್ನು ಕೇಳಲು ನೀನು ಅವನಿಗೆ ಏನೆಂದು ಉತ್ತರಿಸುವೆ? ಯಾರೋ ಆ ಮಗುವನ್ನು ತಂದರು— ಎಂದು ನಿನ್ನ ಉತ್ತರವೇ? ಆ ಉತ್ತರವನ್ನು ಕೇಳಿ ನಿನ್ನ ತಮ್ಮನು ತುಸು ಹೊತ್ತು ಸುಮ್ಮನಾದರೂ, ಕೆಲ ಸಮಯದ ನಂತರ ಆತನಲ್ಲಿ ಮತ್ತೊಮ್ಮೆ ಸಂಶಯವು ಬಂದೊಡಗಿ ಅವನು ಪುನಃ ನಿನ್ನೊಡನೆ ಅದೇ ಪ್ರಶ್ನೆಯನ್ನು ಕೇಳುವನು.

ಅವನು ಈ ಪ್ರಶ್ನೆಯನ್ನು ನನಗೆ ಕೇಳಿದ್ದರೆ, ನಾನೇನು ಉತ್ತರವನ್ನು ಕೊಡುತ್ತಿದ್ದೆನೆಂಬುದಾಗಿ ಕೇಳುವೆಯಾ? ಆಗ ನಾನು ಧೈರ್ಯವಾಗಿ ಆ ಮಗು ದೇವರಿಂದ ಬಂದಿತು ಎಂದು ಹೇಳುತ್ತಿದ್ದೆ. ಇದೇ ಸರಿಯಾದ ಉತ್ತರವೆಂದು ನನ್ನ ತಿಳುವಳಿಕೆ. ಯಾಕೆಂದರೆ ಸರ್ವಸೃಷ್ಟಿಯೂ ದೇವರಿಂದಲೇ ಉತ್ಪನ್ನವಾಗತಕ್ಕದ್ದು. ಮನುಷ್ಯನ

ದೇಹದಲ್ಲಿಯ ಆತ್ಮವೂ ಕೂಡ ದೇವರಿಂದಲೇ ಬರುವದು. ನಿನ ಚಿಕ್ಕ ತಮ್ಮನಿಗೆ ಇದಕ್ಕಿಂತ ಹೆಚ್ಚಿನ ವಿವರಣೆಯು ಅಗತ್ಯವಿಲ್ಲ. ಕಾರಣ ಅವನಿಗೆ ಭೂಮಿತಿಯ ಲೆಕ್ಕವು ಎಷ್ಟು ಕಷ್ಟಕರವಾಗಿದೆಯೋ, ಈ ಪ್ರಶ್ನೆಯೂ ಅಷ್ಟೇ ಬಿಗಿಯಾಗಿರುವದು.

ಆದರೆ ಈ ಪ್ರಶ್ನೆಗೆ ಉತ್ತರವನ್ನು ಹುಡುಗನು ಬೆಳೆದಂತೆ ಹೆಚ್ಚಿನ ವಿವರಣೆಯ ಮೂಲಕ ಕೊಡಬೇಕಾಗುವದು. ತರುಣನಿಗೆ ಜೀವದ ರಹಸ್ಯವನ್ನು ಕುರಿತು ಸಾಧ್ಯವಿದ್ದಷ್ಟು ಯೋಗ್ಯ ಜ್ಞಾನವನ್ನು ಪಡೆಯುವ ಹಕ್ಕಿದೆ. ಪ್ರಾಣಿಗಳು ಹೇಗೆ ಹುಟ್ಟುತ್ತವೆ-ಮನುಷ್ಯನ ಜನ್ಮದ ರಹಸ್ಯವೇನು ? ಎಂಬ ಗೂಢ ವಿಚಾರಗಳನ್ನು ಅವನು ತಿಳಿಯಲೇಬೇಕಾದುದು. ಇದರ ಸಂಪೂರ್ಣ ತಿಳುವಳಿಕೆಯು ದೇವರಿಗೆ ಮಾತ್ರವೇ ಅವಗತವಾದದ್ದು. ನಮಗೆ ಅದು ರಹಸ್ಯವಾದರೂ, ಸಂತಾನಾಭಿವೃದ್ಧಿಯು ಹೇಗೆ ಅಣುಕೋಣದಿಂದ ಉಂಟಾಗುವದೆಂದು ನಮಗೆ ವಿಜ್ಞಾನವು ತಿಳಿಸುವದು. ಅತಿ ಚಿಕ್ಕ ಬೀಜದಿಂದ ದೊಡ್ಡ ಮರವೊಂದು ಬೆಳೆಯುವದನ್ನು ನಾವು ನೋಡಿದ್ದೇವೆ. ಇದೊಂದು ಪ್ರಕೃತಿಯ ರಹಸ್ಯ. ಇದನ್ನು ಕುರಿತು ಸಂಪೂರ್ಣ ಜ್ಞಾನವು ಸರ್ವೇಶ್ವರನಿಗೆ ಮಾತ್ರ ಇದೆ.

ಆದರೆ ಮನುಷ್ಯ ಜೀವನದ ರಹಸ್ಯವು ಇನ್ನೂ ಮಹತ್ತಾದುದು. ಮನುಷ್ಯ ಜೀವನವು ಐದಾರು ಅಡಿ ಎತ್ತರದ ನೂರಾರು ಕಿಲೋಗ್ರ್ಯಾಮ್ ಭಾರದ್ದಾಗಿ ಕಂಡರೂ, ಸೂಕ್ಷ್ಮದರ್ಶಕದವಿನಹ ಕಾಣದ ಅತಿಸೂಕ್ಷ್ಮ ಜೀವಕಣದಿಂದ ಬರುವದು. ಈ ಅತಿಸೂಕ್ಷ್ಮ ಜೀವಕಣವು ತಾಯಿಯ ದೇಹದಲ್ಲಿ ಬೆಳೆಯುತ್ತ ಬರುತ್ತಿದೆ. ಈ ಕಣವು ಗಂಡೋ-ಹೆಂಣೋ ದೇವರೇ ಬಲ್ಲ. ಅದನ್ನು ಕುರಿತು

ಸಂಪೂರ್ಣ ಜ್ಞಾನವು ವಿಜ್ಞಾನಿಗಳಿಗೆ ಈ ವರೆಗೆ ಕೂಡ ಆಗಿಲ್ಲ. ಆದರೆ ಹಲವೊಂದು ಸಲ ಮಗುವೊಂದನ್ನು ನೋಡಿ ನಾವು, ಅದರ ಕಣ್ಣುಗಳು ತಂದೆಯಂತೆ ನೀಲ, ಕೂದಲು ತಾಯಿಯ ಕೂದಲಿನಂತೆ ಕಂದು ಎಂದು ಹೇಳುತ್ತೇವೆ. ಆದರೆ ಅದೆಲ್ಲಾ ಹೇಗೆ ಆ ಸೂಕ್ಷ್ಮ ಜೀವಾಣುವಿನಲ್ಲಿ ಅಡಗಿಕೊಂಡಿತು ಎಂಬುದನ್ನು ಮಾತ್ರ ಹೇಳಲ-ಸಾಧ್ಯ. ಪ್ರಾಣಿಶಾಸ್ತ್ರಜ್ಞರು ಆ ಎಲ್ಲಾ ವಿಷಯಗಳು, ಶರೀರ-ಮನಸ್ಸು ಮತ್ತು ಸ್ವಭಾವ ಆ ಚಿಕ್ಕ ಧಾತುವಿನಲ್ಲಿ ಅಡಗಿದೆ ಎಂದು ಮಾತ್ರ ಹೇಳುವರಲ್ಲದೆ ಅದು ಹೇಗೆ ಎಂದು ವಿವರಿಸಲು ಅವರಿಗಿನ್ನೂ ತಿಳಿದಿಲ್ಲ.

ಇದೊಂದು ಗೂಢ ವಿಚಾರವೇ ಸರಿ. ಕಲಾಕಾರನ ಬುದ್ಧಿ ಶಕ್ತಿ, ಚಿತ್ರಕಾರನ ನಿಪುಣತೆ, ಯಾಂತ್ರಿಕನ ಚತುರತೆ ಈ ಎಲ್ಲಾ ವಿಷಯಗಳು ಹೇಗೆ ಆ ಸೂಕ್ಷ್ಮ ಧಾತುವಿನಲ್ಲಿ ಅವಿತುಕೊಂಡಿರುವದು ? ಈ ರಹಸ್ಯವನ್ನು ನಾವು ಗೌರವಿಸಬೇಕೆ ಹೊರತು ಮತ್ತೇನು ಮಾಡಲೂ ಸಾಧ್ಯವಿಲ್ಲ. ದೇವರಿಗೆ ಮಾತ್ರ ತಿಳಿದ ಈ ಗುಟ್ಟು ಜೀವನದ ಉದಯ ಕಾಲದಲ್ಲಿ ನಾವು ಕಣ್ಣಾರೆ ಕಾಣುವೆವಷ್ಟೆ !

ತಾಯಿಯ ಉದರದಲ್ಲಿ ಮಗು ಎಷ್ಟು ಕಾಲ ಜೀವಿಸುತ್ತದೆ ? ಹೆಚ್ಚಾಗಿ ಒಂಭತ್ತು ತಿಂಗಳು. ಆದರೆ ಕೆಲ ಸಂದರ್ಭದಲ್ಲಿ ಏಳು-ಎಂಟು ತಿಂಗಳಿಗೇ ಜನ್ಮಿಸುವುದುಂಟು.

ಜೀವಾಣುವಿನಿಂದ ಪ್ರಾರಂಭವಾದ ಈ ಹೊಸ ಸೃಷ್ಟಿಯು ಅತಿ ಚಿಕ್ಕವಸ್ತು. ಆದರೆ ಅದು ದಿನದಿಂದ ದಿನಕ್ಕೆ ಬೆಳೆದು ದೊಡ್ಡದಾಗುತ್ತಿದೆ. ಒಂದು ತಿಂಗಳಲ್ಲಿ ಅದು ಅರ್ಧ ಇಂಚಿಗಿಂತಲೂ

ದೊಡ್ಡದಾಗುತ್ತಿದೆ. ಎರಡನೆಯ ತಿಂಗಳಿನಲ್ಲಿ ಅತಿ ಚಿಕ್ಕ ಕೈಕಾಲುಗಳೂ ತಲೆ ಭಾಗವೂ ಗೋಚರಿಸುವದು. ಐದನೆಯ ತಿಂಗಳಲ್ಲಿ ಈ ಸೂಕ್ಷ್ಮಪ್ರಾಣಿಯು ಹತ್ತು ಇಂಚುಗಳಷ್ಟು ದೊಡ್ಡದಾಗಿ ಕಾಣುವದು. ಆಗ ತಾಯಿಗೆ ತನ್ನ ಉದರದಲ್ಲಿನ ಮಗುವಿನ ಚಲನವಲನಗಳ ಅರಿವಾಗುವದು. ಹೊರಗಿನಿಂದಲೂ ಆ ಉದರದಲ್ಲಿ ಮಗುವಿದೆ, ಅಥವಾ ಆವಳು ಗರ್ಭಿಣಿಯಾಗಿದ್ದಾಳೆನ್ನುವದು ತಿಳಿದು ಬರುವದು. ಅಂತಹ ಗರ್ಭಿಣಿ ಸ್ತ್ರೀಯನ್ನು ಕುರಿತು ಗೇಲಿ ಮಾಡುವ ಜನರು ನಿಜವಾಗಿ ನೀಚರೇ ಸೈ! ತಮ್ಮನ್ನು ಕೂಡ ಹಾಗೆಯೇ ತಮ್ಮ ತಾಯಿಯು ಒಂಭತ್ತು ತಿಂಗಳು ಹೊತ್ತುಕೊಂಡಿದ್ದಳೆನ್ನುವದನ್ನು ಅವರು ಮರೆತರೆ ಹೇಗೆ? ಅಂತವರು ನಿಜವಾಗಿ ಮಾನವ ಜನಾಂಗಕ್ಕೇನೆ ಕಳಂಕವನ್ನು ತಂದೊಡ್ಡುವವರು.

ಈಗ ಆ ಮಗುವಿಗೆ ಒಂಭತ್ತು ತಿಂಗಳು. ಈ ವರೆಗೆ ತಾಯಿಯು ತನ್ನ ಸ್ವಂತ ರಕ್ತದಿಂದ ಆ ಮಗುವನ್ನು ಪೋಷಿಸಿದ್ದಳು. ತಾಯಿಯ ದೇಹದ ರಕ್ತನಾಳಗಳಿಗೆ ಜೋಡಿಸಿದ ರಕ್ತನಾಳವೊಂದು ಮಗುವಿನ ನಾಭಿಗೆ ಹೊಂದಿಕೊಂಡು ಇದ್ದು ಅದರ ಮೂಲಕ ಮಗುವಿಗೆ ಆಹಾರ ಸಿಗುತ್ತಿತ್ತು. ಆದರೆ ಮಗುವು ಹುಟ್ಟಿದಾಗ ಆ ನಾಳವನ್ನು ಕತ್ತರಿಸಿ ಹಾಕುವರು. ಮಗುವು ಈಗ ತಾಯಿಯಿಂದ ಬೇರೆಯಾಗಿ ಹೊರಗಡೆ ಜೀವಿಸಬೇಕು ಮಗುವಿನ ಜನನವು ತಾಯಿಗೆ ಅತಿ ಹೆಚ್ಚು ವೇದನೆಯನ್ನು ಕೊಡುತ್ತಿದೆ. ಈ ವರೆಗೆ ಮಗುವು ತಾಯಿಯ ದೇಹದೊಳಗೆ ಒಂದೇ ಶರೀರದಂತಿದ್ದು ಜೀವಿಸುತ್ತಿದ್ದಿತು. ಹುಟ್ಟುವಾಗ ಗರ್ಭಕೋಶವನ್ನು ಬಿಟ್ಟು ಹೊರಗೆ ಬಂದಿತು. ಅದು ಹೊರಗೆ ಬರುವ ಮಾರ್ಗಕ್ಕೆ ಯೋನಿಮಾರ್ಗವೆಂದು ಹೆಸರು. ಈ ದ್ವಾರವು ಸಂಕುಚಿತವಾದುದರಿಂದ ಮಗುವಿನ ಜನನವು ತಾಯಿಗೆ

ತುಂಬಾ ನೋವನ್ನುಂಟು ಮಾಡುತ್ತದೆ. ಹಲವು ಮಂದಿ ತಾಯಂದಿರು ಹತ್ತಿರದ ಆಸ್ಪತ್ರೆಗೆ ಹೋಗಿ ಹೆರುವ ಕಾರ್ಯವನ್ನು ಪೂರೈಸುವರು. ಯಾಕಂದರೆ ಅಲ್ಲಿ ವೈದ್ಯರು ಅವರ ವೇದನೆಯನ್ನು ಕಡಿಮೆ ಮಾಡಲು ತುಂಬಾ ಸಹಾಯ ಸಲ್ಲಿಸುವರು. ಹೆರಿಗೆಯ ಕೆಲಸದಲ್ಲಿ ಸಹಾಯಕಳಾಗುವ ಹೆಂಗಸಿಗೆ ಸೂಲಗಿತ್ತಿ ಎಂದು ಕರೆ-ಯುತ್ತಾರೆ.

ಹುಟ್ಟಿದ ಮಗುವನ್ನು ಎತ್ತಿ ತಾಯಿಯ ಕೈಯಲ್ಲಿ ಕೊಟ್ಟಾಗ ಅವಳಿಗೆ ಆಗುವ ಆನಂದವಾದರೂ ಎಷ್ಟು? ಹಲವು ತಾಯಂದಿರು ಪ್ರಸವ ಕಾಲದಲ್ಲಿಯೇ ಮರಣ ಹೊಂದುತ್ತಾರೆ. ತಾಯಿ ಸತ್ತು ಮಗುವು ಬದುಕುತ್ತಿದೆ. ಮಗುವನ್ನು ಉದರದಲ್ಲಿಯೇ ಕೊಂದಿದ್ದರೆ ತಾಯಿಯು ಬದುಕಬಹುದಾಗಿತ್ತು. ಆದರೆ ತಾಯಿಯು ಮಗುವಿನ ಕೊಲೆಗಾರ್ತಿಯಾಗದೆ ತನ್ನ ಜೀವನವನ್ನೇ ಮಗುವಿನ ಪ್ರಾಣಕ್ಕಾಗಿ ತ್ಯಜಿಸುತ್ತಾಳೆ. ಎಂತಹ ತ್ಯಾಗ!

ಇದನ್ನು ಕೆಲವೊಂದು ದಿನ ಹುಡುಗರಿಗೆ ಹೇಳುವಾಗ ಅಲ್ಲಿದ್ದ ಹದಿಮೂರು ವರ್ಷದ ಬಾಲಕನು ಕಣ್ಣೀರಿಟ್ಟನು. ಬಳಿಕ ನನಗೆ ತಿಳಿದು ಬಂದದ್ದೇನಂದರೆ ಆ ಹುಡುಗನ ತಾಯಿಯು ಅವನಿಗೆ ಜನ್ಮ ಕೊಡುವಾಗಲೇ ತೀರಿಹೋಗಿದ್ದಳೆಂಬುದು. ಆ ಮೇಲೆ ಆ ಹುಡುಗನು ಸಿಕ್ಕಿದಾಗಲೆಲ್ಲ ಅವನ ತಾಯಿಯ ತ್ಯಾಗದ ಹಿರಿಮೆಯನ್ನು ಕುರಿತು ಮಾತನಾಡಿ ಅವನನ್ನು ಹುರಿದುಂಬಿಸುವದು ನನ್ನ ಕೆಲಸವಾಗಿ ಬಿಟ್ಟಿತು.

ಮದುವೆಯ ಸಮಾರಂಭವನ್ನು ನೋಡಿದಾಗಲೆಲ್ಲ ನನಗೆ ತುಂಬಾ ಅಭಿಮಾನ. ಆ ವಧೂ–ವರರು ದೇವರ–ಗುರುಹಿರಿಯರ

ಸಾಕ್ಷಿಯಾಗಿ ದಾಂಪತ್ಯದ– ಕರ್ತವ್ಯದ ಪೂರ್ತಿ ಹೊಣೆಗಾರಿಕೆಯನ್ನು ಹೊರುವುದು, ನಿಜವಾಗಿ ತುಂಬಾ ಜವಾಬುದಾರಿಕೆಯ ವಿಷಯ-ವಾಗಿದೆ. ಅದರಲ್ಲೂ ವಧುವಿನ ಜವಾಬುದಾರಿಕೆ ಬಹಳ ಮಹತ್ವದ್ದು ಅದರ ಪರಿಣಾಮ ಕಷ್ಟಕರ. ಜೀವಾಂತ್ಯದ ವರೆಗೆ ಪತಿವ್ರತೆಯಾ-ಗಿರುವದು ಮಾತ್ರವಲ್ಲ, ತಾಯಿತನದ ವೇದನೆಯನ್ನು ಮಗುವಿಗಾಗಿ ತನ್ನ ಜೀವ ಹಾಗೂ ಸರ್ವಸ್ವವನ್ನೂ ಅರ್ಪಿಸಲು ಅವಳು ಸಿದ್ಧಳಾಗಿ-ರಬೇಕು. ನಿನ್ನ ತಾಯಿಯೂ ಕೂಡ ತನ್ನ ಮದುವೆಯ ದಿನ ಗುರು–ಹಿರಿಯರ ಸಾಕ್ಷಿಯಾಗಿ ಇಂತಹ ಮಹತ್ತರ ನಿರ್ಣಯಕ್ಕೆ ಬಂದಿದ್ದಳು.

ಇದೇ ಕಾರಣಕ್ಕಾಗಿ ತಾಯಿಯು ತನ್ನ ಮಗುವನ್ನು ಅಷ್ಟು ಹೆಚ್ಚಾಗಿ ಪ್ರೀತಿಸುವದು. ಅದು ತನ್ನ ಮಗು ತಾನು ಕಷ್ಟ–ವೇದನೆ ಗಳಿಗೆ ತುತ್ತಾಗಿ ಹೆತ್ತ ಶಿಶು. ಎಂತಹ ಕುರೂಪಿ, ಹೆಡ್ಡ–ಎಂತಹವೇ ಲೋಪ ದೋಷಗಳಿರಲಿ ಅದು ಅವಳಿಗೆ ಪ್ರೀತಿಯ ಮಗು. ಅವ-ಳೆಂದೂ ತಾತ್ಸಾರ ಭಾವವನ್ನು ತೋರಿಸಲಾರಳು. ಆ ಮೂರ್ಖ ಮಗುವಿನಲ್ಲಿಯೂ ಅವಳು ದೈವಿಕ ಬಿಂಬವನ್ನು ಕಂಡು ದೇವರಿತ್ತ ಆ ಮಗುವಿನಲ್ಲಿ ಸಂತೋಷಪಡುವಳು.

ಜನ್ಮತಾಳಿದಂದಿನಿಂದ ತನ್ನ ಮಗುವಿಗಾಗಿ ತಾಯಿಯು ಸಹಿ ಸುವ ಕಷ್ಟ ತೊಂದರೆಗಳಾದರೂ ಎಷ್ಟು ? ಮೊದಲು ತನ್ನ ದೇಹಾಂಶವಾದ ಮೊಲೆ ಹಾಲಿನಿಂದ ಅವಳು ಅದನ್ನು ಪೋಷಣೆ ಮಾಡುತ್ತಾಳೆ. ಹಲವು ತಿಂಗಳವರೆಗೆ ಮೊಲೆ ಹಾಲೇ ಮಗುವಿನ ಪುಷ್ಟಿಕರ ಆಹಾರ. ಇದಲ್ಲದೆ ಮಗುವಿಗೆ ಅಸೌಖ್ಯವಾದಾಗ, ಕಷ್ಟ ಕಾಲ ಬಂದೊದಗಿದಾಗ ಮಗುವಿನ ಪಾಲನ ಪೋಷಣೆಯ ಕೆಲಸವು ಅವಳವೇ.

ನೀನು ಚಿಕ್ಕವನಿದ್ದಾಗ ನಿನಗಾಗಿ ಎಷ್ಟೆಲ್ಲಾ ಕಷ್ಟಗಳನ್ನು ನಿನ್ನ ತಾಯಿ ವಹಿಸಿದ್ದಳೆಂಬುದನ್ನು ಯೋಚಿಸಿ ನೋಡು. ನಿನ್ನನ್ನು ಶಿಕ್ಷಿಸುವಾಗಲೂ ನೀನು ಸರಿದಾರಿಯಲ್ಲಿ ನಡೆದು ಮುಂದೆ ಯೋಗ್ಯ ಪುರುಷನಾಗಬೇಕೆಂಬ ಮುಂದಾಲೋಚನೆಯಿಂದಲೇ ನಿನ್ನನ್ನು ತಿದ್ದುವಳು. ಮನೆಯಲ್ಲಿ ವಸ್ತು-ಒಡವೆಗಳು ಇಲ್ಲದಾಗ, ಬಡತನ ದಿಂದ ಇಡಿಯ ಕುಟುಂಬವು ಜೀವನ ಸಾಗಿಸುತ್ತಿರುವಾಗ ಮಕ್ಕಳ ಹೊಟ್ಟೆಗೆ ತಂದೆ-ತಾಯಿಗಳು ಕಡಿಮೆ ಮಾಡುವದಿಲ್ಲ. ತಾಯಿ ತಾನು ಉಂಣದೆಯೂ ತನ್ನ ಪಾಲಿನ ಅನ್ನವನ್ನು ಮಗುವಿಗೆ ಕೊಡು-ವಳು. ಒಬ್ಬ ಬಡ ಹೆಂಗಸು ತನ್ನ ಮಗನ ವಿದ್ಯಾಭ್ಯಾಸಕ್ಕಾಗಿ ತನ್ನ ಸ್ವಂತ ಕಂಣುಗಳನ್ನು ಅಮೇರಿಕದ ಸೈನಿಕನಿಗೆ ಕೊಟ್ಟು ಧನವನ್ನು ಸಂಪಾದಿಸಿದಳಂತೆ! ಆಹಾ ಇದೆಂತಹ ಪ್ರೇಮ!

ತಾಯಿಯು ನಿನಗೆ ಮಾಡಿದಂತಹ ಕೆಲಸಗಳಿಗೆ ಸಂಪೂರ್ಣ ಉಪಕಾರಸ್ಮರಣೆ ಮಾಡಲು ನಿನ್ನಿಂದ ಅಸಾಧ್ಯ. ನೀನು ಬಾಲಕ-ನಾಗಿರುವಾಗ, ಅವಳಿಗೆ ವಿಧೇಯನಾಗಿ ನಡೆದು ಅವಳ ಮನಸ್ಸು ನೋಯಿಸದೆ ಇದ್ದು, ಅವಳನ್ನು ಪ್ರೀತಿಸುವದೇ ನಿನ್ನ ಮುಖ್ಯ ಕರ್ತವ್ಯ. ದೊಡ್ಡವನಾದ ಮೇಲೆ ಅವಳನ್ನು ಸಾಕುವದೂ ನಿನ್ನ ಪ್ರಥಮ ಕರ್ತವ್ಯ. ಹಲವು ಬಾರಿ ತಾಯಿಯ ಉಪಕಾರಸ್ಮರಣೆ ಮಾಡಲು ನಿನ್ನ ಬಾಯಿಯಿಂದ ಶಬ್ದಗಳು ಹೊರಡಲಿಕಿಲ್ಲ. ಅಥವಾ ಅಷ್ಟು ಬುದ್ಧಿವಂತಿಕೆಯೂ ನಿನ್ನಲ್ಲಿ ಇರಲಿಕ್ಕಿಲ್ಲ. ಆದರೂ ನಿನ್ನ ಆಭಾರಿ-ತನದ ಕೃತಜ್ಞತೆಯ ಮನೋಭಾವವೇ ಸಾಕು. ನಿನ್ನ ತಾಯಿಯು ಅದರಿಂದಲೇ ತೃಪ್ತಿಯನ್ನು ಹೊಂದುವಳು. ನಿನ್ನ ಅಂತರಂಗವನ್ನು ತಿಳಿದುಕೊಳ್ಳುವಳು.

# ನೀನು ಮತ್ತು ನಿನ್ನ ತಂದೆ

ಕೆಳಗೆ ಕಾಣಿಸಿದ ಅನುಭವವು ನಿನ್ನ ಮನೆಯಲ್ಲಿಯೇ ನಿನಗೆ ಬರಬಹುದು. ನಿನ್ನ ಚಿಕ್ಕ ತಮ್ಮ—ಇಲ್ಲವೆ ತಂಗಿಯ ಜನ್ಮವಾಗಿ ಕೆಲವೇ ದಿನಗಳಾಗಿವೆ. ನಿನ್ನ ತಾಯಿ ಇನ್ನೂ ಬಾಣಂತಿಯ ಹಾಸಿಗೆಯಲ್ಲಿ ಇದ್ದಾಳೆ. ನಿನ್ನ ಸೋದರತ್ತೆಯೊಬ್ಬಳು ಕೂಸು-ಬಾಣಂತಿಯನ್ನು ಕಾಣಲು ಬರುತ್ತಾಳೆ. ಅವಳು ಮಗುವನ್ನು ನೋಡಿ "ಆಹಾ, ಎಂತಹ ಸುಂದರ ಮಗು, ಗಿಳಿ ಮೂಗು ತಾಯಿಯಂತೆ, ಕಣ್ಣುಗಳು ತಂದೆಯ ಕಣ್ಣುಗಳಂತೆ" ಎಂದು ನಾನಾ ವಿಧವಾಗಿ ಹೊಸ ಮಗುವನ್ನು ಹೊಗಳುವಳು.

ಆದರೆ ಇವೆಲ್ಲಾ ಮಾತುಗಳು ನೀನು ಚಿಕ್ಕವನಾಗಿರುವ ಕಾರಣ ನಿನಗೆ ಹೇಗೆ ಅರ್ಥವಾಗಬೇಕು ? ಆದರೂ ನೀನು ಯೋಚಿಸದೆ ಇರುವದಿಲ್ಲ— ಕಣ್ಣುಗಳು ತಂದೆಯ ಕಣ್ಣುಗಳಂತೆ— ಇದು ಹೇಗೆ ? ಮಗುವಿನ ಜೀವನದಲ್ಲಿ ತಂದೆಯನ್ನೇಕೆ ತರಬೇಕು ? ಇದರಲ್ಲಿ ತಂದೆಯ ಪಾಲೇನು ?

ನಿನ್ನ ಹಿರಿಯರೊಡನೆ ಪ್ರಶ್ನೆ ಕೇಳಿದಾಗ, ಅವರು ತಪ್ಪಿಸಿಕೊಳ್ಳುವದಾಗಲೀ ಇಲ್ಲವೇ ಸರಿಯಾಗಿ ಉತ್ತರ ಕೊಡದೆ ಮರೆಸಿ

ಕೊಳ್ಳುವದಾಗಲಿ ನಿನಗೆ ಕಂಡುಬರುವದು. ಹಲವು ಬಾರಿ, "ಅದೆಲ್ಲಾ ದೊಡ್ಡವನಾದ ಮೇಲೆ ನಿನಗೆ ತಿಳಿದೀತು" ಎಂಬ ಉತ್ತರವೂ ನಿನಗೆ ಸಿಕ್ಕೀತು.

ಹಾಗಾದರೆ ತಂದೆತನದ ಹಿರಿಮೆಯನ್ನು ಕುರಿತು ಹುಡುಗ ನೊಡನೆ ಮಾತನಾಡುವದು ತಪ್ಪೆ? ಎಂದಿಗೂ ತಪ್ಪಲ್ಲ. ಅದನ್ನು ಕುರಿತು ಹೇಳುವಾಗ ಯಾವ ಹುಡುಗರು ಗೇಲಿ ಮಾಡುವದು ಕಂಡು ಬಂದರೆ ಅದಕ್ಕೆ ಮುಖ್ಯ ಕಾರಣವೇನು ಗೊತ್ತೇ? ಅವರಿಗೆ ತಂದೆಯ ಹಿರಿಮೆಯ ಬಗ್ಗೆ ಯಾರೂ ಸರಿಯಾದ ಕಲ್ಪನೆಯನ್ನು ಕೊಡದೆ ಇದ್ದುದೇ ಕಾರಣವಾಗಿದೆ. ಅವರು ಕೆಟ್ಟ ಸಂಗಾತಿಗಳಿಂದ ಸಲ್ಲದ ತಪ್ಪು ಅಭಿಪ್ರಾಯವನ್ನು ಕೇಳಿ ಮನಸ್ಸಿನಲ್ಲಿ ಮಗುವಿನ ಜನನದಲ್ಲಿ ತಂದೆಯ ಪಾಲು ಬಹಳ ಕೆಟ್ಟ ಕೆಲಸ— ನಾಚಿಕೆಯಿಂದ ಮುಚ್ಚಿಡಬೇಕಾದ ವಿಷಯವೆಂದು ತಿಳಿದು ಆ ಬಗ್ಗೆ ಹಾಸ್ಯವಾಡಲು ತೊಡಗುವರು. ನಿಜವಾಗಿ ಹೇಳುವದಾದರೆ ಅವರಿಗೆ ಸರಿಯಾದ ತಿಳುವಳಿಕೆ ಇರುವದಿಲ್ಲ ಮತ್ತು ಇದು ದೈವಿಕ ರಹಸ್ಯಗಳಲ್ಲಿ ಒಂದೆಂದು ಭಾವಿಸುವದಿಲ್ಲ. ಹೊಸ ಜೀವದ– ಮಗುವಿನ– ಹುಟ್ಟು ವಿಕೆಯಲ್ಲಿ ತಂದೆ ಮತ್ತು ತಾಯಿ ಇಬ್ಬರೂ ಪಾಲುಗಾರರಾಗಬೇಕೆಂದು ನಮಗೆ ತಿಳಿದಿದೆ. ಆದರೆ ಅವರ ಕಾರ್ಯಕ್ಕೆ ಫಲಕೊಡುವದು ಸರ್ವೇಶ್ವರನ ಕೈಯಲ್ಲಿದೆ.

ಈ ಹೊಸ ಮಗುವಿನ ಜನನವು ಹೇಗೆ ಉಂಟಾಗುವದೆಂದು ನೀನು ಈ ಪ್ರಾಯದಲ್ಲಿ ಅಗತ್ಯವಾಗಿ ತಿಳಿಯಬೇಕಾಗಿದೆ. ದೇವರು ಸಂತಾನಾಭಿವೃದ್ಧಿಯ ಶಕ್ತಿಯನ್ನು ಪ್ರತಿಯೊಂದು ಸೃಷ್ಟಿಯಲ್ಲಿ ಹಾಕಿ ರುವನೆಂದು ನಾನು ಈ ಮೊದಲೇ ಹೇಳಿರುವೆನು. ಈ ಶಕ್ತಿಯನ್ನು

ಕುರಿತು ಹೆಚ್ಚಿನ ವಿವರಗಳನ್ನು ತಿಳಿಯಲು ನಾವೀಗ ಪ್ರಯತ್ನಿಸುವ. ಪ್ರತಿಯೊಂದು ಸೃಷ್ಟಿಯ ಪ್ರಾಣಿಯಾಗಲಿ, ಸಸ್ಯವಾಗಲಿ ಅತಿ ಚಿಕ್ಕ ಕಣ ಎಂದರೆ ಜೀವಾಣು. ಪ್ರತಿಯೊಂದು ಅಣುವು ದೇವರ-ಸೃಷ್ಟಿ ಕರ್ತನ ಅಪ್ಪಣೆಯ ಮೇರೆಗೆ ಪ್ರತ್ಯೇಕವಾಗಿ ಒಂದೊಂದು ತನ್ನದೇ ಆದ ಕ್ರಿಯೆಯನ್ನು ನೆರವೇರಿಸಬೇಕಾಗಿದೆ. ಅಣುಗಳಲ್ಲಿ ಅತಿ ಪ್ರಾಮುಖ್ಯ ಅಣುಗಳೆಂದರೆ ಜೀವಾಂಕುರ ಅಥವಾ ಮೂಲ ಜೀವಾಣು, ಯಾಕೆಂದರೆ ಇವು ಸಂತಾನಾಭಿವೃದ್ಧಿಯನ್ನು ಮಾಡು-ತ್ತವೆ.

ಪ್ರತಿಯೊಂದು ಜೀವಿಯು ಸ್ತ್ರೀ ಅಂಡಾಣು ಮತ್ತು ಪುರುಷ ಧಾತು ಅಥವಾ ವೀರ್ಯ ಇವೆರಡರ ಸಂಯೋಗದಿಂದ ಉತ್ಪನ್ನವಾಗ ಬೇಕು. ಈ ನಿಯಮವನ್ನು ಸಸ್ಯವರ್ಗವೂ ಕೂಡ ಪಾಲಿಸಿಕೊಂಡು ಬರಬೇಕು. ಬರೇ ಸ್ತ್ರೀ ಅಂಡಾಣುವಿನಿಂದ ಸಂತಾನಾಭಿವೃದ್ಧಿ ಯಾಗುವದಿಲ್ಲ. ಅದೇ ರೀತಿ ಬರೇ ಗಂಡು ವೀರ್ಯದಿಂದ ಜನ-ನೋತ್ಪತ್ತಿಯಾಗುವದಿಲ್ಲ. ಇವೆರಡರ ಒಟ್ಟುಗೂಡುವಿಕೆಯು ಅಗತ್ಯ.

ನಿನ್ನ ಪ್ರಕೃತಿ ಪಾಠದಲ್ಲಿ ನೀನು ಈ ಬಗ್ಗೆ ಕಲಿತಿರಬಹುದು. ಒಂದು ಹೂವನ್ನು ತೆಗೆದುಕೊಂಡರೆ ಅದರ ನಡುವೆ ಒಂದು ಪುಷ್ಪ ಗರ್ಭ ಅಥವಾ ತಂತುವನ್ನು ಕಾಣಬಹುದು. ಅದರ ಬುಡವು ಕೋರವಾಗಿದ್ದು, ಅಂಡಾಶಯವಾಗಿ ಚಿಕ್ಕ ಅಂಡ ಅಥವಾ ತತ್ತಿಗಳಿಂದ ತುಂಬಿರುವದು. ತಂತುವಿನ ಮೇಲ್ಭಾಗದಲ್ಲಿ ಪರಾಗ ಕೇಸರದಿಂದ ಬರುವ ಪುಷ್ಪರೇಣುಗಳಿರುವವು. ಗಾಳಿ-ಕ್ರಿಮಿಕೀಟ, ಹಾತೆಪತಂಗ ಮತ್ತು ಮುಖ್ಯವಾಗಿ ಜೇನುನೊಣಗಳು ಈ ಪುಷ್ಪ ರೇಣುಗಳ ಮತ್ತು ಅಂಡಗಳ ಸಂಯೋಗವನ್ನು ಉಂಟು ಮಾಡುವವು. ಇದಕ್ಕೆ ಪರಾಗ

ಸ್ಪರ್ಶವೆಂದು ಹೆಸರು. ಇದು ಒಂದು ಹೂವಿನಿಂದ ಮತ್ತೊಂದು ಹೂವಿನಲ್ಲಿ ಜರಗುವದು. ಪರಾಗ ಸ್ಪರ್ಶದಲ್ಲಿ ಗಂಡು ರೇಣುಗಳು ಸ್ತ್ರೀ ಅಂಡಗಳೊಡನೆ ಸಂಯೋಗವಾದಾಗ ಹೊಸ ಜೀವಿಯ ರಚನೆ ಯಾಗುತ್ತದೆ. ಇದೇ ವ್ಯವಸ್ಥೆಯು ಪ್ರಾಣಿಗಳಲ್ಲಿಯೂ ಜರಗುತ್ತಿದೆ. ಇದು ಹೇಗೆ ಉಂಟಾಗುವದೆಂದು ಮುಂದೆ ನೋಡುವ.

ಮೇಲೆ ಹೇಳಿದ ಜೀವನದ ಉಕ್ಕಿನ ನಿಯಮವು ಮನುಷ್ಯ-ನಿಗೂ ಅನ್ವಯಿಸುತ್ತದೆ. ಮಾನವಜೀವಿ ಉತ್ಪತ್ತಿಯಾಗಬೇಕಾದರೆ ಗಂಡಸಿನ ವೀರ್ಯವು ಹೆಂಗಸಿನ ಅಂಡದೊಡನೆ ಸಂಯೋಗಗೊಳ್ಳ-ಬೇಕು. ಇದು ಜನನೇಂದ್ರಿಯಗಳ ಮೂಲಕ ನಡೆಯುವದು. ಈ ಜನನೇಂದ್ರಿಯಗಳನ್ನು ಮಾನವನಿಗೆ ದೇಹದ ಇತರ ಅಂಗಾಂಗ ಗಳಂತೆ ದೇವರು ಕೊಟ್ಟುದಾಗಿದೆ. ಅವು ಕೇವಲ ವೈಯಕ್ತಿಕ ಸುಖಾನುಭವಕ್ಕೆ ಮಾತ್ರವಲ್ಲ. ಅವುಗಳಿಂದ ಮಾನವ ಜನಾಂಗದ ಅಭಿವೃದ್ಧಿಯಾಗುವದಕ್ಕೋಸ್ಕರ. ಅವುಗಳ ಮೂಲಕ ಸಂತಾನಾ ಭಿವೃದ್ಧಿಯಾಗಬೇಕು. ಈ ಜನನೇಂದ್ರಿಯಗಳಲ್ಲಿ ಹಲವಾರು ವ್ಯತ್ಯಾಸಗಳಿವೆ. ಹುಡುಗರ ಜನನೇಂದ್ರಿಯಗಳು ಹುಡುಗಿಯರ ಜನನೇಂದ್ರಿಯದಂತಿಲ್ಲ. ಗಂಡುಸರ ಜನನೇಂದ್ರಿಯಗಳು ಹೆಂಗುಸರ ಜನನೇಂದ್ರಿಯದಂತಿಲ್ಲ. ಹೇಗೆ ನಾವು ನಮ್ಮ ಕಂಣು–ಕಿವಿ–ಮೂಗು–ಬಾಯಿ–ಮುಂತಾದ ದೇಹದ ಅಂಗಾಂಗಗಳನ್ನು ಕುರಿತು ಒಳಿತನ್ನು, ಅವುಗಳ ಪ್ರಯೋಜನೆಗಳನ್ನು ಕುರಿತು ಒಳ್ಳೆಯದಾಗಿ ಮಾತನಾಡುತ್ತೇವೋ ಹಾಗೆಯೇ ಜನನೇಂದ್ರಿಯಗಳ ಪ್ರಯೋಜನೆ ಯನ್ನು ಕುರಿತೂ ಕೂಡ ಮುಚ್ಚು ಮರೆಯಿಲ್ಲದೆ ಯೋಗ್ಯ ಸಂದರ್ಭ ದಲ್ಲಿ ಮಾತನಾಡಬಹುದು. ಆದರೆ ಈ ಮಾತುಗಾರಿಕೆಯನ್ನು ಕೆಟ್ಟ ರೀತಿಯಲ್ಲಿ ಉಪಯೋಗಿಸುವದಲ್ಲ. ಇದನ್ನು ನಾವು ಸಾವ

ಧಾನತೆಯಿಂದ, ಬುದ್ಧಿವಂತಿಕೆ ಹೆಚ್ಚಾದಂತೆ ಮತ್ತು ಪ್ರಾಯಕ್ಕೆ ಬಂದಂತೆ ನಮ್ಮ ಮುಂದಿನ ಜೀವನಕ್ಕೆ ಸಹಾಯವಾಗುವಂತೆ ಉಪಯೋಗಿಸಬೇಕಲ್ಲದೆ, ತಮಾಷೆ- ಗೇಲಿಗಾಗಿ ಅಲ್ಲ. ಹಾಗೆ ಮಾಡುವದು ಮಹಾತಪ್ಪು. ಈ ಯೋಗ್ಯವಾದ ಮಾತನ್ನು ಆಡಲು ಈಗ ಹಲವರಲ್ಲಿ ನಾಚಿಕೆಯು ಅಡ್ಡಿ-ಆತಂಕವನ್ನು ಒಡ್ಡುತ್ತಿದೆ.

ಸ್ತ್ರೀ ಮತ್ತು ಪುರುಷ ಜನನೇಂದ್ರಿಯಗಳಲ್ಲಿ ಅತಿ ಮುಖ್ಯ ಭೇದಭಾವವೆಂದರೆ, ಸ್ತ್ರೀ ಜನನೇಂದ್ರಿಯವು ಶರೀರದ ಒಳಭಾಗದಲ್ಲಿದ್ದು, ಮಗುವಿನ ಗರ್ಭಧಾರಣೆಯಾಗಿ ಅದು ಗರ್ಭಕೋಶದಲ್ಲಿ ಒಂಭತ್ತು ತಿಂಗಳು ಜೀವಿಸಿರುವಂತೆ ನೋಡಿಕೊಳ್ಳುತ್ತಿದೆ. ಪುರುಷ ಜನನೇಂದ್ರಿಯವು ದೇಹದ ಹೊರಗಡೆ ಇರುವದು.

ತಾಯಿಯ ದೇಹದೊಳಗೆ ಪಕ್ಕೆಲುಬುಗಳ ಅಡಿಭಾಗದಲ್ಲಿ ಎಡ ಮತ್ತು ಬಲ ಬದಿಗಳಲ್ಲಿ ಎರಡು ಅಂಡಾಶಯಗಳಿವೆ. ಪ್ರತಿ ತಿಂಗಳಲ್ಲಿ, ವೈಕಲ್ಪಿಕನಾಗಿ ಒಂದು ಅಂಡಾಶಯದಿಂದ ಒಂದು ಅಂಡವು ಬೆಳೆದು ಪಕ್ವವಾಗಿ ಹೊರಗೆ ಬಂದು ಗರ್ಭಾಶಯದ ನಾಳದಲ್ಲಿ ಓಡಾಡುತ್ತದೆ. ಈ ಅಂಡಕ್ಕೆ ಹೆಚ್ಚುಕಡಿಮೆಯ ಒಂದು ದಿನದೊಳಗೆ ಗಂಡು ವೀರ್ಯದ ಭೆಟ್ಟಿಯಾಗದಿದ್ದರೆ ಅದು ಸತ್ತು ಹೋಗಿ ಹಾಳು ರಕ್ತದೊಡನೆ ವಿಸರ್ಜಿತವಾಗುವದು. ಇದಕ್ಕೆ ರಜಪ್ರವಾಹ ಅಥವಾ ಋತುಸ್ರಾವ ಎಂದು ಕರೆಯುತ್ತೇವೆ. ಇದೇ ಸಮಯ ಹೆಂಗುಸರು ಮನೆಯಿಂದ ಹೊರಗಿದ್ದುಕೊಳ್ಳುವದು, ಕೆಲವರಲ್ಲಿ ವಾಡಿಕೆ. ಈ ಸ್ರಾವವು ಪ್ರತಿ ತಿಂಗಳಲ್ಲಿ ನಡೆಯುವದು. ಇದು ಹಲವು ಬಾರಿ ಪ್ರಾಯ ತುಂಬಿದ ತರುಣಿಯರಿಗೂ ಹೆಂಗುಸರಿಗೂ ಅಸೌಖ್ಯವನ್ನು ವೇದನೆಯನ್ನು ಉಂಟು ಮಾಡುವದಾಗಿದೆ.

ಕೆಲವು ಸಲ ಅನಾರೋಗ್ಯದ ಮನೋಸ್ಥಿತಿಯಲ್ಲಿ ಇರವದೂ ಉಂಟು.

ಮೇಲೆ ತಿಳಿಸಿದ ಸಂಕೇತಗಳನ್ನು ಅಥವಾ ಋತುಸ್ರಾವದ ಕುರುಹನ್ನು ನೀನು ನಿನ್ನ ಸೋದರಿಯಲ್ಲಿ ಕಂಡರೆ ನೀನು ಅವಳಲ್ಲಿ ವಿಶೇಷವಾಗಿ, ವಿನಯಶೀಲನಾಗಿಯೂ ವಿವೇಚನೆಯುಳ್ಳವನಾಗಿಯೂ ವರ್ತಿಸಬೇಕು. ಈ ಸ್ರಾವವು ಪ್ರಾಯಃ ಹದಿನೆರಡು ಹದಿಮೂರು ವರ್ಷ ಪ್ರಾಯದಿಂದ ಪ್ರಾರಂಭವಾಗುವದು.

ಮೇಲೆ ಹೇಳಿದ ಜನನ ಗ್ರಂಥಿಗಳಂತೆ ಹುಡುಗರ ಮತ್ತು ಪುರುಷರಲ್ಲಿಯೂ ಅಂತಹ ಗ್ರಂಥಿಗಳು ಇವೆ. ಈ ಗ್ರಂಥಿಗಳನ್ನು ಯಾ ವೃಷಣ ಅಥವಾ ತರಡು ಬೀಜಗಳನ್ನು ಇಮ್ಮಡಿ ಪದರಿನ ಚರ್ಮದ ಚೀಲಗಳಲ್ಲಿ ಸುರಕ್ಷಿತವಾಗಿ ಸೃಷ್ಟಿಕರ್ತನು ಇಟ್ಟಿರುವನು. ಈ ಚರ್ಮಚೀಲಕ್ಕೆ ವೃಷಣ ಚೀಲವೆಂದು ಹೆಸರು. ಈ ವೃಷಣ ಗಳು ಯಾವಾಗಲೂ ವೀರ್ಯವನ್ನು ತಯಾರು ಮಾಡುತ್ತವೆ. ಈ ವೀರ್ಯದಲ್ಲಿ ಜೀವಾಣುಗಳು ಅತಿಸೂಕ್ಷ್ಮವಾಗಿವೆ. ಅವುಗಳ ಗಾತ್ರ ೦.೦೦೪ ಮಿಲಿಮೀಟರ ಇದೆಯಂತೆ. ಆದರೆ ಇಂತಹ ಸೂಕ್ಷ್ಮ ಗಾತ್ರದ ಒಂದು ಜೀವಧಾತುವಿನಲ್ಲಿ ಐದಾರಡಿ ನೂರಾರು ಕಿಲೋ ಗ್ರ್ಯಾಮದ ಮಾನವ ಶಿಶುವು ಅಡಕವಾಗಿರುತ್ತದೆ. ಇದು ನಿಜ-ವಾಗಿಯೂ ದೈವಿಕ ರಹಸ್ಯವಲ್ಲವೇ ?

ಪುರುಷ ಜನನೇಂದ್ರಿಯದ ಮತ್ತೊಂದು ಭಾಗವೆಂದರೆ ಲಿಂಗ. ಇದೂ ಕೂಡ ವೃಷಣಗಳಂತೆ ದೇಹದ ಹೊರಗಡೆಯೇ ಇರುತ್ತದೆ. ಮಕ್ಕಳಾಟಿಕೆಯು ಅಥವಾ ಒರಟು ಹೆಸರಿನಿಂದ ಈ ಜನನೇಂದ್ರಿಯ

ವನ್ನು ಕರೆಯುವದಕ್ಕಿಂತ ಸರಿಯಾದ ಹೆಸರುಗಳನ್ನು ಕಲಿತು ಯೋಗ್ಯವಾಗಿ ಉಪಯೋಗಿಸುವದು ಉತ್ತಮ.

ಮಗುವೊಂದು ಜನನವಾಗಬೇಕೆಂದು ಬಯಕೆಯಾದರೆ ತಂದೆಯು ತನ್ನ ಲಿಂಗದ ಮೂಲಕ ವೀರ್ಯವನ್ನು ತಾಯಿಯ ಜನನೇಂದ್ರಿಯದ ಒಳಗಿದ್ದ ಗರ್ಭಾಶಯದೊಳಗೆ ಹರಿಸುತ್ತಾನೆ. ಗಂಡು ಜೀವಧಾತು ಪಕ್ವವಾದ ಹೆಂಣು ಅಂಡವನ್ನು ಭೇಟಿಯಾದರೆ ಅವೆರಡರ ಸಂಯೋಗವಾಗಿ ಹೊಸ ಜೀವಿಯೊಂದು ಉಂಟಾಗುತ್ತದೆ. ನ್ಯಾಯಬದ್ಧವಾಗಿ ಮದುವೆಯಾದ ಸ್ತ್ರೀ–ಪುರುಷರು ಮಾತ್ರ ಈ ಕ್ರಿಯೆಯನ್ನು ಮಾಡಬಹುದು. ಯಾಕಂದರೆ ಆ ಮೂಲಕ ಅವರು ತಮ್ಮೊಳಗಿನ ಪರಸ್ಪರ ಪ್ರೇಮವನ್ನು ತೋರಿಸುವದು ಮಾತ್ರವಲ್ಲ ಅವರಿಗೆ ಆ ಪ್ರೇಮದ ಫಲವಾಗಿ ಮಗುವೊಂದನ್ನು ಪಡೆಯುವ ಬಯಕೆಯೂ ಇದೆ. ನ್ಯಾಯಬದ್ಧವಾಗಿ ವಿವಾಹವಾದವರಲ್ಲಿ ಈ ಕ್ರಿಯೆಯು ನ್ಯಾಯಬದ್ಧವಾದದ್ದಲ್ಲದೆ, ಪವಿತ್ರವಾದ ಕಾರ್ಯವೂ ಆಗಿದೆ. ಅವರ ಗಂಡ—ಹೆಂಡಿರ ಐಕ್ಯತೆಯು ಪರಮಪವಿತ್ರವಾದುದು. ಧರ್ಮಗ್ರಂಥಗಳು ಈ ಸ್ತ್ರೀ–ಪುರುಷರ ಪವಿತ್ರ ಐಕ್ಯತೆಯಲ್ಲಿ ಇಬ್ಬರೂ ಒಂದು ದೇಹವಾಗಿ ಪರಿಣಮಿಸುವರು ಎಂದು ಹೇಳುತ್ತವೆ. ಆದುದರಿಂದ ತಂದೆ ಮತ್ತು ತಾಯಿಯ ಒಟ್ಟುಗೂಡುವಿಕೆಯು ಮಗುವಿನ ಜನನಕ್ಕೆ ಅತ್ಯಗತ್ಯ.

ಕ್ರಮಬದ್ಧವಾಗಿ ವಿವಾಹವಾಗದ ಸ್ತ್ರೀ— ಪುರುಷರಾಗಲೀ, ತರುಣ ತರುಣಿಯರಾಗಲೀ ಈ ಕ್ರಿಯೆಯನ್ನು ಮಾಡಬಾರದು. ಯಾಕೆಂದರೆ ನ್ಯಾಯಬದ್ಧವಾಗಿ ಅವರ ಮದುವೆಯಾಗಿಲ್ಲ. ಪ್ರಕೃತಿ ನಿಯಮವನ್ನು ಮೀರಿದವರಿಗೆ ಮಹಾಪಾಪವು ತಟ್ಟದೆ ಹೋಗದು.

ಈ ಕ್ರಿಯೆಯನ್ನು ತಂದೆ–ತಾಯಿಗಳಿಬ್ಬರಲ್ಲದೆ ಬೇರೆ ಯಾರ ಸಮಕ್ಷಮದಲ್ಲಿಯೂ ಮಾಡಲಸಾಧ್ಯ. ಆದರೆ ಈ ಸಂದರ್ಭದಲ್ಲಿ ತಂದೆ–ತಾಯಿ ಇಬ್ಬರಲ್ಲದೆ ಮೂರನೆಯ ವ್ಯಕ್ತಿಯೊಂದು ಇದೆ ಎಂದು ತಿಳಿದುಕೊಳ್ಳುವದು ಅಗತ್ಯ. ಹೇಗೆ ನಮ್ಮ ಎಲ್ಲಾ ಕ್ರಿಯೆಗಳನ್ನು ಈ ವ್ಯಕ್ತಿಯು ನೋಡುವದೋ ಅದೇ ರೀತಿ ಈ ರಹಸ್ಯವಾದ ಕ್ರಿಯೆಯನ್ನು ಅದು ನೋಡುವದು. ಆ ವ್ಯಕ್ತಿ ಎಂದರೆ ನಮನ್ನೆಲ್ಲ ಸೃಷ್ಟಿಸಿದ ದೇವರು. ಜನನ ಕ್ರಿಯೆಯನ್ನು ತಂದೆ–ತಾಯಿಗಳು ಮಾಡಿದರೂ ಮಗುವನ್ನು ದಯಪಾಲಿಸುವದು ದೇವರ ಇಚ್ಛೆ. ಅಷ್ಟು ಮಾತ್ರವಲ್ಲ; ಆ ಮಗುವಿಗೆ ಪವಿತ್ರ ಆತ್ಮವನ್ನು ಕೊಡು-ವಂತಹದು ದೇವರ ಕೆಲಸ. ತಂದೆ–ತಾಯಿಗಳು ತಮ್ಮಲ್ಲಿದ್ದ ದೈಹಿಕ ಜೀವಾಣುಗಳನ್ನು ಕೊಡುವದೇನೋ ನಿಜ. ಆದರೆ ಅವುಗಳಲ್ಲಿ ದೇವರು ಚಿರಕಾಲ ಬಾಳುವ ಆತ್ಮವನ್ನು ಹಾಕದಿದ್ದರೆ ಅವುಗಳಿಂದೇನೂ ಪ್ರಯೋಜನವಿಲ್ಲ. ಆದುದರಿಂದ ಈ ಲೈಂಗಿಕ ಕ್ರಿಯೆಗೆ ತಂದೆ–ತಾಯಿಯ ಸಹಕಾರದ ಹೊರತು ಸರ್ವೇಶ್ವರನ ಅನು-ಮತಿಯೂ ಅವಶ್ಯ.

ಹೀಗೆ ಒಂದು ಹೊಸ ಜೀವಿಯ ಅಸ್ತಿತ್ವದಲ್ಲಿ ತಂದೆ–ತಾಯಿ ಮತ್ತು ದೇವರ ಸಹಕಾರವು ಇರಬೇಬೇಕೆಂದಾಯಿತು ಇದಕ್ಕೆ ಮೂರ್ತಿಯಾದ ಪವಿತ್ರ ಸಮರಸ ಎಂದು ಹೇಳಬಹುದು. ಆದರೆ ಹಲವು ಬಾರಿ ನಾವು ಪತ್ರಿಕೆಗಳಲ್ಲಾಗಲಿ–ಪುಸ್ತಕಗಳಲ್ಲಾಗಲಿ ವಿವಾಹ ವಿಚ್ಛೇದನೆ ಕುರಿತು ಓದುತ್ತೇವೆ. ಆದರೆ ಈ ವಿವಾಹ ವಿಚ್ಛೇದನಗಳು ಧರ್ಮಮಂಡಲಿಯ ಅನುಮತಿಯಿಂದಲ್ಲ ಆದರೆ ರಾಷ್ಟ್ರ-ದಾಡಳಿತೆಯಿಂದ.

ಕೆಲವು ದೇಶಗಳಲ್ಲಿ ಗಂಡ-ಹೆಂಡಿರು ಸರಕಾರದ ಉದ್ಯೋಗಿಗಳ ಸಮಕ್ಷಮದಲ್ಲಿ ವಿವಾಹವಾಗಬೇಕೆಂದು ನಿಯಮವಿದೆ. ತಾರತಮ್ಯ, ಭಿನ್ನಾಭಿಪ್ರಾಯ, ಜಗಳ ಇವುಗಳಿಂದಾಗಿ ಗಂಡ-ಹೆಂಡಿರು ಬೇರೆಯಾದರೆ ಅವರ ಆಸ್ತಿಪಾಸ್ತಿಗಳನ್ನು ಪಾಲುಮಾಡುತ್ತಾರೆ. ಆದರೆ ದೇವರ ಮುಂದೆ ಇವರ ಪಾಲುಗಾರಿಕೆಯೂ- ವಿಚ್ಛೇದನವೂ ಸರಿಹೋಗುವದಿಲ್ಲ. ಒಂದು ಸಲ ಒಂದುಗೂಡಿಸಿದ ಆ ಜೋಡಣೆಯು ಗಂಡ-ಹೆಂಡಿರಲ್ಲಿ ಯಾರೊಬ್ಬರ ಸಾವಿನ ಹೊರತು ಅವರೊಳಗೆ ವಿಚ್ಛೇದನವಾಗುವದು ಅಸಾಧ್ಯ.

ಈಗ ಒಬ್ಬ ತಂದೆಯು ಮೊದಲನೇ ಸಲ ತನ್ನ ಪ್ರಥಮ ಮಗುವನ್ನು ಕೈಯಲ್ಲಿತ್ತಿ ಹಿಡಿದಿರುವನೆಂದು ಭಾವಿಸುವ. ಆ ಸಂದರ್ಭದಲ್ಲಿ ಆತನ ಆಲೋಚನೆಯೂ ಮಾತುಗಳೂ ಏನು ?

"ಇದು ನನ್ನ ಮಗು. ನನ್ನ ವಿನಹ ಅದು ಅಸ್ತಿತ್ವಕ್ಕೆ ಬರಲಿಲ್ಲ. ಇದು ದೇವರ ಸೃಷ್ಟಿ. ಇದನ್ನು ಯೋಗ್ಯ ರೀತಿಯಲ್ಲಿ ಸಾಕಿ ದೇವರು ಕೊಟ್ಟ ಈ ಫಲವನ್ನು ನಾನು ಅವನಿಗೆ ಒಂದು ದಿನ ಅರ್ಪಿಸಬೇಕಾಗಿದೆ."

ಆದುದರಿಂದ ಪ್ರಿಯ ಬಾಲಕರೇ ನೀವು ಯಾವಾಗಲೂ ನಿಮ್ಮ ತಂದೆಯನ್ನು ಗೌರವಿಸಬೇಕು. ಅವನ ಹಿರಿಮೆಯನ್ನು ಅರಿತು ಆತನಿಗೆ ಗೌರವ ಸಲ್ಲಿಸಬೇಕು. ಒಂದು ದಿನ ನೀವೂ ಕೂಡ ತಂದೆಯಾಗುವ ಸುಯೋಗವು ಬಂದೊದಗಲೂ ಬಹುದು. ಆಗ ನಿಮ್ಮ ಕರ್ತವ್ಯವೂ ಇದೇ ಆಗುವದು.

ಇಲ್ಲಿ ನಾವು ಸ್ವಲ್ಪ ಹೊತ್ತು ತಡೆದು ಒಂದು ಪ್ರಶ್ನೆಯನ್ನು ಕೇಳುವದು ಉತ್ತಮ. ಹಾಗಾದರೆ ಮನುಷ್ಯನಾರು ? ದೇವರು

ತನ್ನ ಸೃಷ್ಟಿಯಲ್ಲಿ ಆತನನ್ನು ಉತ್ತಮ ಸೃಷ್ಟಿಯನ್ನಾಗಿ ಮಾಡಲು ಕಾರಣವೇನು ?

ಹೌದು; ಮನುಷ್ಯನೂ ಕೂಡ ಇತರ ಪ್ರಾಣಿಗಳಂತೆ ಒಂದು ಪ್ರಾಣಿ ಎಂದು ನಿಮಗೆ ತಿಳಿದಿದೆ. ಆದರೆ ಈ ಮಾನವ ಪ್ರಾಣಿಗೂ ಇತರ ಪ್ರಾಣಿಗಳಿಗೂ ತುಂಬಾ ವ್ಯತ್ಯಾಸವಿದೆ. ಮನುಷ್ಯನು ಇತರ ಪ್ರಾಣಿಗಳಂತೆ ಶರೀರ ಮತ್ತು ಜೀವಧಾತುವಿನಿಂದ ಒಳಗೊಂಡಿ-ರುವದು ಮಾತ್ರವಲ್ಲ, ಆತನಲ್ಲಿ ಅತ್ಯಮೂಲ್ಯವಾದ ಹಾಗೂ ಯಾರಿಂದಲೂ ರಚಿಸಲಸಾಧ್ಯವಾದ ಆತ್ಮವಿದೆ. ಈ ಆತ್ಮದ ಮೂಲಕ ಅವನು ದೇವರ ಪ್ರತಿಬಿಂಬ. ಮನುಷ್ಯನಲ್ಲಿ ದೇಹ ಮತ್ತು ಶರೀರಗಳು ಪರಸ್ಪರ ಒಂದುಗೂಡಿವೆ. ಅವನು ತನ್ನ ವಿವೇಚನಾ ಶಕ್ತಿಯನ್ನೂ ಸ್ವಾತಂತ್ರ್ಯವುಳ್ಳ ಚಿತ್ತವನ್ನೂ ಉಪಯೋಗಿಸಿ ತಾತ್ಕಾಲಿಕ ಹಾಗೂ ಚಿರಂತನ ಮೋಕ್ಷವನ್ನು ಪಡೆಯಲು ಬೇಕಾಗಿದೆ. ಅವನಲ್ಲಿದ್ದ ವಿವೇಕ ಮನಸ್ಸು- ಮತ್ತು ವೈಯಕ್ತಿಕ ಜವಾಬುದಾರಿಗಳು ಅವನನ್ನು ಇತರ ಪ್ರಾಣಿಗಳಿಂದ ಮೇಲಿನ ಮಟ್ಟಕ್ಕೆ ಕೊಂಡೊಯ್ಯುತ್ತವೆ.

## ನೀನು ಮತ್ತು ನಿನ್ನ ದೇಹ

ನಿನ್ನ ಈ ಜೀವನದ ಅಂತಸ್ತು ಬಹಳ ಪ್ರಾಮುಖ್ಯವಾದುದು. ನೀನೀಗ ನಿನ್ನ ಬಾಲ್ಯಾವಸ್ಥೆಯಿಂದ ತಾರುಣ್ಯದ ಹೊಸ್ತಿಲಲ್ಲಿ ಕಾಲಿಡುತ್ತಿರುವಿ. ಈಗ ನಿನ್ನಲ್ಲಿ ದೈಹಿಕ-ಮಾನಸಿಕ-ನೈತಿಕ-ಆಧ್ಯಾತ್ಮಿಕ ಹಾಗೂ ಮತ್ತಿತರ ಬದಲಾವಣೆಗಳು ಕಂಡುಬರುವವು. ದಿನ ಹೋದಂತೆ ಇವುಗಳ ಅನುಭವವು ನಿನಗಾಗುವದು.

ಬಾಲ್ಯಾವಸ್ಥೆಯಿಂದ ತಾರುಣ್ಯಕ್ಕೆ ಎಂದರೆ ಹದಿಮೂರರಿಂದ ಇಪ್ಪತ್ತರ ಪ್ರಾಯದ ವರೆಗೆ ಬರುವ ಅವಧಿಗೆ ತಾರುಣ್ಯಾವಸ್ಥೆ ಎನ್ನುವರು. ಈ ಅವಧಿಯಲ್ಲಿ ಹೊಸ ಹೊಸ ಅವಿದಿತ ಮನೋಭಾವಗಳೂ, ಆಕಾಂಕ್ಷೆಗಳೂ ಈ ತರುಣನಲ್ಲಿ ಎದ್ದುಕಾಣುವವು. ಶಾಲೆ-ಮನೆಗಳಲ್ಲಿ ವಿಧೇಯತೆಯು ಕಷ್ಟಕರವಾಗಿ ಪರಿಣಮಿಸುವದು. ಮುಖ್ಯವಾಗಿ ಹೆತ್ತವರು ಮತ್ತು ಶಿಕ್ಷಕರು ಇನ್ನು ಅವನನ್ನು ಬಾಲ್ಯಾವಸ್ಥೆಯಲ್ಲಿದ್ದಂತೆ ವರ್ತಿಸುವಾಗ ಅವನಿಗದು ಆಗದು. ಎಲ್ಲರೂ ತನ್ನನ್ನು ಕುರಿತು ತಪ್ಪು ಅಭಿಪ್ರಾಯ ಮಾಡಿಕೊಂಡಿರುವರೆಂದು ಅವನ ತಿಳುವಳಿಕೆಯಾಗುವದು. ಆದರೆ ಇಂಥ ಸಂದಿಗ್ಧ ಅವಧಿಯಲ್ಲಿ ನಿನ್ನನ್ನೇ ನೀನು ಸರಿಯಾಗಿ ತಿಳಿದುಕೊಳ್ಳುವೆಯೋ ಎನ್ನುವದೇ ಪ್ರಶ್ನೆ.

ಒಂದು ಸಮಯ ಹಸನ್ಮುಖನಾಗಿದ್ದರೆ ಇನ್ನೊಂದು ಸಮಯ ಚಿಂತಾಕ್ರಾಂತನಾಗಿರುವಿ. ದೇಹದ ಅಂಗಾಂಗಗಳು ಬೆಳೆದಂತೆ ಮಾನಸಿಕ ಪರಿಪಕ್ವತೆಯೂ ಬೆಳೆಯುವದು. ದೇಹದಲ್ಲಿ ಆದ ಬದಲಾವಣೆಗಳನ್ನು ನೋಡಿ ನಿನಗೆಯೇ ಹಲವುಬಾರಿ ಆಶ್ಚರ್ಯವಾಗುವದು. ಇದು ಹಲವರನ್ನು ತವಕ-ವ್ಯಾಕುಲತೆಗೊಯ್ಯುವದು. ಒಂದೇ ಮಾತಿನಲ್ಲಿ ಹೇಳುವುದಾದರೆ ಬಾಲ್ಯಾವಸ್ಥೆಯ ಅಶಾಂತ ಪ್ರವೃತ್ತಿಯೂ ಸರಳತನವೂ ಮಾಯವಾಗಿ ಚಟುವಟಿಕೆಯು ಹೆಚ್ಚುವದು. ಈ ವರೆಗೆ ಅನುಭವಿಸದಂತಹ ನಾನಾ ಶೋಧನೆಗಳು ನಿನ್ನನ್ನು ಕಾಡುವವು. ಪರಿಶುದ್ಧತೆಗೆ ವಿರೋಧವಾದ ಪ್ರೇರಣೆ, ಪ್ರಲೋಭನೆಗಳು ನಿನ್ನನ್ನು ವ್ಯಸನಕ್ಕೊಳಗಾಗುವಂತೆ ಮಾಡುವವು. ಈ ಅವಧಿಯು ನಿಜವಾಗಿಯೂ ಕಷ್ಟಕರ. ನಿನ್ನನ್ನು ಸಮತೆಯಲ್ಲಿಡಲು ಈಗ ನಿನಗೆ ಹಿರಿಯರ ಸಲಹೆ ಮತ್ತು ಆದರ ಅಗತ್ಯವಿದೆ.

ಜನನೇಂದ್ರಿಯಗಳ ಗ್ರಂಥಿ ಮತ್ತಿತರ ಅಂಗಾಂಗಗಳು ಪ್ರಾಮುಖ್ಯತೆಯನ್ನು ಈ ಮೊದಲೇ ನಿಮಗೆ ತಿಳಿಸಿದೆ. ಆದರೆ ಸಂತಾನಾಭಿವೃದ್ಧಿಯಲ್ಲಿಯ ಕಾರ್ಯವನ್ನು ಸುರಸವಾಗಿ ಜರಗುವಂತೆ ಈ ಗ್ರಂಥಿಗಳು ಮಾಡುವದಲ್ಲದೆ, ಅವು ಮತ್ತೂ ಒಂದು ಕಾರ್ಯವನ್ನು ಎಸಗುವವು. ಆದರೆ ಇದು ಹೇಗೆ ಜರಗುವದೆಂದು ನಿನಗೆ ಈಗಲೇ ಸರಿಯಾಗಿ ಅರ್ಥವಾಗಲಿಕ್ಕಿಲ್ಲ. ಆದರೂ ಅದನ್ನು ತಿಳಿ-ಯುವದು ಅಗತ್ಯ.

ಜನನೇಂದ್ರಿಯ ಗ್ರಂಥಿಗಳು ಪುಷ್ಟಿಕಾರಕ ಸತ್ವಗಳನ್ನೂ ಉತ್ಪತ್ತಿ ಮಾಡುವವು. ಇವು ಶರೀರದ ಎಲ್ಲಾ ರಕ್ತನಾಳಗಳನ್ನು

ಸೇರಿ, ರಕ್ತದೊಡನೆ ಇಡೀ ದೇಹವನ್ನು ಸಂಚರಿಸಿ ಅನುಕ್ರಮವಾಗಿ ಬಾಲಕನು ಪ್ರಾಯದವನಾಗುವಂತೆ ಮಾಡುವವು. ಜನನೇಂದ್ರಿಯ ಗ್ರಂಥಿಗಳ ಚಟುವಟಿಕೆಗಳಿಗೆ ತರುಣಾವಸ್ಥೆಯಲ್ಲಿ ಅಡ್ಡಿ ಆತಂಕಗಳನ್ನು ತಂದೊಡ್ಡಿದರೆ ಆ ಹುಡುಗನು ಎಂದಿಗೂ ಸಂಪೂರ್ಣ ಪುರುಷನಾಗಿ ಬೆಳೆಯಲು ಸಾಧ್ಯವಿಲ್ಲ. ಆದರಿಂದ ಪುರುಷತ್ವದ ಮೂಲ ಸ್ಥಾನವು ಜನನೇಂದ್ರಿಯ ಗ್ರಂಥಿಗಳನ್ನು ಹೊಂದಿಕೊಂಡಿದೆ ಎಂದು ಹೇಳು ವದು ಸರಿ. ಈ ವಿಷಯವನ್ನು ಚೆನ್ನಾಗಿ ತಿಳಿದುಕೊಳ್ಳಲು ಕೆಳಗಿನ ಉದಾಹರಣೆಯನ್ನು ನೋಡಿರಿ.

ಒಬ್ಬ ಹುಡುಗನ ಜನನೇಂದ್ರಿಯ ಗ್ರಂಥಿಗಳಿಗೆ ಯಾವುದೇ ರೀತಿಯಿಂದ ಪೆಟ್ಟಾಗಿ ಅವುಗಳನ್ನು ಶಸ್ತ್ರಚಿಕಿತ್ಸೆಯಿಂದ ತೆಗೆದರೆಂದು ಭಾವಿಸುವ. ಆಗ ಆ ಹುಡುಗನ ಸ್ಥಿತಿ ಏನಾಗುವದು? ಅವನು ಇತರರಂತೆ ಪ್ರಾಯಕ್ಕೆ ಬಂದಲ್ಲಿ, ದೇಹದಲ್ಲಿ ಬೆಳೆಯುವನಾದರೂ ಸಂಪೂರ್ಣ ಪುರುಷತ್ವವನ್ನು ಪಡೆಯಲಾರನು. ಅವನ ಸ್ವರವು ಬದಲಾಗದೆ ಬಾಲಕನ ಸ್ವರದಂತೆ ಸಪುವಿರುವದು. ಮುಖಚರ್ಯೆಯು ಬದಲಾಗದೆ ಉಳಿಯುವದು. ಮುಖದಲ್ಲಿ ಗಡ್ಡ-ಮೀಸೆಗಳೂ ಕಾಣಿಸವು. ಒಂದೇ ಮಾತಿನಿಂದ ಹೇಳುವದಾದರೆ, ಅವನ ಇಡಿಯ ವರ್ತನೆಯೇ ಪುರುಷತ್ವಹೀನವಾಗಿರುವದು. ಆದುದರಿಂದ ಪುರು-ಷತ್ವದ ಮೂಲಸ್ಥಾನವಾದ ಜನನೇಂದ್ರಿಯ ಗ್ರಂಥಿಗಳನ್ನು ಗೌರವ ದಿಂದ ಕಾಪಾಡಬೇಕೆಂದು ತಿಳಿದು ಬಂದೀತು.

ಪ್ರತಿಯೊಬ್ಬ ಯುವಕನು ತನ್ನ ತರುಣಾವಸ್ಥೆಯಲ್ಲಿ ಹಲವು ಗೂಢ ಪ್ರಶ್ನೆ ಹಾಗೂ ಅನುಭವಗಳಿಂದ ದಿಗ್ಭ್ರಮೆ ಗೊಂದಲಿಕ್ಕೀಡಾ ಗುವನು. ಈ ಮೊದಲು ತಿಳಿಸಿದಂತೆ ರಕ್ತಗತವಾದ ಪುಷ್ಟಿಕಾರಕ

ಸತ್ವಗಳು ರಕ್ತವನ್ನು ಹಾಗೇ ದೇಹದ ಅಂಗಾಂಗಗಳನ್ನು ತಲ್ಲಣ ಗೊಳಿಸುತ್ತವೆ. ಅದೇ ರೀತಿ ಲಿಂಗದ ರಕ್ತನಾಳಗಳೂ ಕೂಡ ರಕ್ತ ದಿಂದ ತುಂಬಿಕೊಂಡು ಹಲವು ಬಾರಿ ದೇಹದಲ್ಲಿ ಹಾಗೂ ಜನ- ನೇಂದ್ರಿಯದಲ್ಲೂ ಅಲ್ಲೋಲ ಕಲ್ಲೋಲತೆಯನ್ನು ಉಂಟುಮಾಡು ವವು. ಇದು ಅಹಿತ ಪರಿಣಾಮುವನ್ನು ಉಂಟುಮಾಡುವದಾದರೂ ಇದು ಪೂರ್ಣಕ್ರಮಬದ್ಧ ಸಾಮಾನ್ಯ ಪ್ರಕ್ರಿಯೆಯೆಂದು ಯುವಕರು ತಿಳಿಯಬೇಕು. ಇದರಲ್ಲೇನೂ ತಪ್ಪಿಲ್ಲ. ಈ ಪ್ರಕ್ರಿಯೆಯನ್ನು ನಿನ್ನಿಂದ ತಡೆಗಟ್ಟಲಿಕ್ಕಾಗಲೀ ಕ್ಷಿಪ್ರಗೊಳಿಸುವದಕ್ಕಾಗಲೀ ಸಾಧ್ಯವಿಲ್ಲ. ಆ ಸಮಯದಲ್ಲಿ ಶಾಂತಚಿತ್ತನಾಗಿರುವದೇ ಅತ್ಯುತ್ತಮ ಉಪಾಯ. ಅದು ತನ್ನಿಂದ ತಾನಾಗೆಯೇ ಸ್ವಲ್ಪ ಹೊತ್ತಿನಲ್ಲಿ ಮಾಯವಾಗುವದು.

ಇದಕ್ಕಿಂತಲೂ ಮತ್ತೊಂದು ವಿಷಯುವು ತರುಣರನ್ನು ಕಳವಳ ಪಡಿಸುವಂಥದಾಗಿದೆ. ಈ ಸಮಸ್ಯೆಗೆ ಪರಿಹಾರವನ್ನು ಪಡೆಯು ವದು ಅವರಿಂದಲೇ ಸಾಧ್ಯ. ಒಂದು ರಾತ್ರಿ ತರುಣನೊಬ್ಬನು ನಿದ್ದೆಯಿಂದೆದ್ದು ತನ್ನ ಲಿಂಗದಿಂದ ದ್ರವಪದಾರ್ಥವೇನೋ ನಿರ್ಗ ಮಿಸುವದನ್ನು ಕಾಣುತ್ತಾನೆ. ಆ ರಾತ್ರಿ ಅವನಿಗೆ ಹಲವು ಅಸಂಗತ ಕನಸುಗಳು ಬಿದ್ದಿದ್ದವು. ಏನಾಯಿತೆಂದು ಅವನಿಗೆ ವ್ಯಸನವೇ ವ್ಯಸನ ! ತಾನು ಪಾಪಕಾರ್ಯಮಾಡಿದೆನೇ ಎಂಬ ಭಯ. ತನ್ನ ಹಾಸಿಗೆಯನ್ನು ನೋಡುವವರು ಏನೆಂದಾರು ಎನ್ನುವ ಶಂಕೆ. ಈ ವಿಷಯುವನ್ನು ಕುರಿತು ಹುಡುಗರು ಏನೂ ಭಯಡಪಬೇಕಾದು ದಿಲ್ಲ. ಇದು ಸಹಜವಾದ ಮತ್ತೊಂದು ಪ್ರಕ್ರಿಯೆ. ಇದರಲ್ಲಿ ಸ್ವಲ್ಪವೂ ಪಾಪವಿಲ್ಲ. ಇಂತಹ ವಿಸರ್ಜನೆಗಳು ಆಗಾಗ ನಿನ್ನಲ್ಲಿ ಉಂಟಾಗುವವು. ಇವುಗಳಿಗೆ ಇರುಳಿನ ವಿಸರ್ಜನೆಗಳೆನ್ನುವರು. ಪ್ರಕೃತಿಯು ಶರೀರಕ್ಕೆ ಬೇಡವಾದಷ್ಟು ವೀರ್ಯವನ್ನು ಉತ್ಪತ್ತಿಗೊಳಿ

ಸುತ್ತದೆ. ಈ ಹೆಚ್ಚಾದ ದ್ರವಪದಾರ್ಥವನ್ನು ಅದೇ ಪ್ರಕೃತಿಯು ನಮ್ಮ ದೇಹವು ವಿಸರ್ಜನೆ ಮಾಡುವಂತೆ ಏರ್ಪಾಡು ಮಾಡುತ್ತದೆ. ಹೀಗೆ ಆಗಾಗ ಹೆಚ್ಚಾದ ಹಾಗೂ ದೇಹಕ್ಕೆ ಬೇಡವಾದ ( ಮಲ ವಿಸರ್ಜನೆಯಂತೆ ) ಪದಾರ್ಥಗಳನ್ನು ಅದು ಹೊರಹಾಕುತ್ತದೆ. ಇದು ಪ್ರತಿಯೊಬ್ಬನಲ್ಲಿಯೂ ಉಂಟಾಗುವದು. ಅದಕ್ಕಾಗಿ ನೀನೇನೂ ಗಾಬರಿಪಡಬೇಕಾದುದಿಲ್ಲ. ಹಾಗೆ ಹೆದರುವ ಬದಲು ನೀನು ಶಾಂತಚಿತ್ತನಾಗಿ ಹೀಗೆ ಹೇಳುವದು ಉತ್ತಮ:

" ಅನುಕ್ರಮವಾಗಿ ನಾನು ಪುರುಷತ್ವವನ್ನು ಹೊಂದುವವನಾಗಿರುತ್ತೇನೆ. ದೇವರು ನನ್ನನ್ನು ಪರಿಪಕ್ವ ಗಂಡುಸನ್ನಾಗಿ ಮಾಡಿ ಸಂತಾನಾಭಿವೃದ್ಧಿಯ ಶಕ್ತಿಯನ್ನು ನೀಡಲನುವಾಗಿರುವನು. "

ನಮ್ಮ ಪುರುಷತ್ವದ ಮೂಲ ಸ್ಥಾನವಾದ ಜನನೇಂದ್ರಿಯ ಗ್ರಂಥಿಗಳನ್ನು ಅವಕ್ಕೆ ಸಂಬಂಧಿಸಿದ ಇತರ ಅಂಗಗಳನ್ನೂ ನಾವು ಗೌರವದಿಂದ ಕಾಪಾಡಬೇಕು. ಇಲ್ಲಿ ನಮ್ಮ ಮರ್ಯಾದೆಗೆ ಗೂಢವಾದ ಕಾರಣವಿದೆ. ಯಾಕಂದರೆ ಮನುಷ್ಯನಲ್ಲಿ ನಾಚಿಕೆ ಎಂಬ ವಸ್ತುವಿದೆ. ಇದರಿಂದಾಗಿ ಆತನು ತನ್ನ ಜನನೇಂದ್ರಿಯಗಳನ್ನು ಇತರರಿಗೆ ತೋರಿಗೊಡುವದಿಲ್ಲ. ಅವುಗಳನ್ನು ಅಗತ್ಯವಿಲ್ಲದೆ ನೋಡಲು ಬಯಸುವದಿಲ್ಲ. ಅವುಗಳನ್ನು ಮುಟ್ಟಲು ಅವನಿಗೆ ಮನಸ್ಸಾಗುವದಿಲ್ಲ. ಇದರಿಂದ ಆ ಇಂದ್ರಿಯಗಳು ಕೆಟ್ಟವೆಂದು ಅಭಿಪ್ರಾಯ ಪಡಬಾರದು. ಅವು ಕೆಟ್ಟ ಅಂಗಗಳೆಂದು ಅವುಗಳನ್ನು ಇತರರಿಗೆ ತೋರಿಸಲು ಅಥವಾ ಮುಟ್ಟಲು ಮನುಷ್ಯನು ಇಚ್ಛೆಪಡದೆ ಇರುವದಿಲ್ಲ. ಅವು ದೇಹದ ಇತರ ಅಂಗಗಳಷ್ಟೇ ಒಳ್ಳೆಯ ಅಂಗಗಳು. ಅವುಗಳನ್ನು ದೇವರೇ ರಚಿಸಿದುದು. ಆದರೆ ಅವುಗಳನ್ನು ಅಡಗಿಸಿ ಇಡಲು ಮುಖ್ಯ ಕಾರಣವೇನೆಂದರೆ ಅವು ಭವಿಷ್ಯ

ದಲ್ಲಿ ಮನುಷ್ಯನಿಗೆ ತುಂಬಾ ಪ್ರಯೋಜನಕ್ಕೆ ಬರುವ ಅಂಗಗಳು. ಅವುಗಳಿಂದಲೇ ಸಂತಾನಾಭಿವೃದ್ಧಿಯಾಗಬೇಕು. ಅಲ್ಲದೆ ಅವು ಮುಖ್ಯವಾಗಿ ರಹಸ್ಯವಾದ ವೈಯಕ್ತಿಕ ಅಂಗಗಳು. ಆದುದರಿಂದಲೇ ಮನುಷ್ಯನು ಅವುಗಳನ್ನು ಪೂಜ್ಯತೆಯ ಲಜ್ಜೆಯಿಂದ ಅಡಗಿ-ಸಿಡುವನು.

ಇದಲ್ಲದೆ ನಾವೆಲ್ಲರೂ ಮೂಲ ಪಾಪಕ್ಕೆ ಗುರಿಯಾದವರೆಂದೂ ಅದರ ಪರಿಣಾಮವಾಗಿ ಪ್ರತಿಯೊಬ್ಬನಲ್ಲಿ ಕೆಟ್ಟ ಆಲೋಚನೆ, ಆಚಾರ-ವಿಚಾರಗಳು ಮೂಡಿಬರುತ್ತಿವೆಯೆಂದೂ ನಾವು ಮರೆಯ ಬಾರದು. ಮೂಲ ಪಾಪದ ಮೊದಲು, ಆದಿ ತಂದೆ-ತಾಯಿಗಳಿಗೆ ಲಜ್ಜೆ ಎಂದರೆ ಏನೆಂದು ತಿಳಿದಿರಲಿಲ್ಲ. ಅವರು ತಮ್ಮ ಅಂಗಾಂಗ ಗಳನ್ನು ಮುಚ್ಚಿಡುತ್ತಿರಲಿಲ್ಲ. ಈ ಮೂಲ ಪಾಪದ ಪರಿಣಾಮವಾಗಿ ಇತರರು ನಮ್ಮ ದೇಹದ ಅಂಗಾಂಗಗಳನ್ನು ದುರಾಶೆ, ಕಾಮಾಸಕ್ತಿ-ವಕ್ರದೃಷ್ಟಿಯಿಂದ ನೋಡಿ ಅಥವಾ ಕೆಟ್ಟ ಆಲೋಚನೆಗಳಿಗೆ ಎಡೆ ಸಿಗುವಂತೆ ಸಂದರ್ಭ ಒದಗಿಸಿಕೊಡುವದು ನಮ್ಮ ಮಹಾಪರಾಧ. ಅದಕ್ಕಾಗಿಯೇ ನಾವು, ಮುಖ್ಯವಾಗಿ ಹೆಂಗುಸರು ಮತ್ತು ಹುಡುಗಿ ಯರು ಸರಿಯಾಗಿ ಬಟ್ಟೆ-ಬರೆಗಳನ್ನು ತೊಟ್ಟುಕೊಳ್ಳಬೇಕೆಂಬ ನಿಯಮ. ನಮ್ಮ ಅಜಾಗ್ರತೆಯಿಂದ, ಹಲವುಬಾರಿ ಉದ್ದೇಶ ಪೂರ್ವಕವಾಗಿ ಇತರರನ್ನು ಪಾಪಕ್ಕೆ ಸೆಳೆಯುವದು ನಮ್ಮ ದೊಡ್ಡ ತಪ್ಪು.

ವ್ಯಾಯಾಮದ ಅಥವಾ ಆಟದ ಸಮಯದಲ್ಲಿ ಅಥವಾ ಈಜು ವಾಗ ನಿನಗೆ ಇರುಳಿನ ವಿಸರ್ಜನೆಯಾಗುವ ಸಂದರ್ಭ ಬಂದರೆ ನೀನೇನೂ ಗಾಬರಿಪಡಬೇಕಾಗಿಲ್ಲ. ನೀನು ಉದ್ದೇಶಪೂರ್ವಕವಾಗಿ ಸಂಮತಿಸಿದ್ದಾದರೆ ನಿನಗೆ ಪಾಪದೋಷವು ಬರುವದು. ಪ್ರಕೃತಿ

ನಿಯಮದಂತಾದರೆ ನೀನೇನೂ ಹೆದರಬೇಕಾದುದಿಲ್ಲ. ಜನನೇಂದ್ರಿಯ ಗಳನ್ನು ಮುಟ್ಟಬಾರದು ಅಥವಾ ನೋಡಬಾರದು ಎಂದರೆ ಅವುಗಳ ಶುಚಿತ್ವದ ಕಡೆಗೆ ಗಮನಕೊಡಕೂಡದೆಂದರ್ಥವಲ್ಲ. ದೇಹದ ಬೇರೆ ಅಂಗಗಳನ್ನು ಹೇಗೆ ನೀನು ಶುಚಿಯಾಗಿ ಇಡುವೆಯೋ ಅದೇ ರೀತಿ ಜನನೇಂದ್ರಿಯಗಳನ್ನು ತೊಳೆದು ಬಹಳ ಶುಚಿಯಾಗಿ ಇಡಬೇಕು. ಆದರೆ ಆ ಅಂಗಗಳನ್ನು ಹಿಡಿದು ಆಟವಾಡುವದು ಅಥವಾ ಇತರ ಹುಡುಗರು ಅವನ್ನು ಹಿಡಿಯುವದು ಮಾತ್ರ ತಪ್ಪು. ಇಲ್ಲಿ ನಿಮಗೊಂದು ಎಚ್ಚರಿಕೆಯ ಸೂಚನೆಯನ್ನು ಕೊಡುವದು ಅಗತ್ಯ. ಕೆಟ್ಟ ಸಂಗಡಿಗರ ಸಹವಾಸದಿಂದ ಹಲವುಬಾರಿ ಒಳ್ಳೆಯ ಹುಡುಗರೂ ಕೂಡ ಕೆಟ್ಟ ಸ್ವಭಾವವನ್ನು ಕೈಕೊಳ್ಳುತ್ತಾರೆ. ಆ ಕೆಟ್ಟ ಸಂಗಾತಿ ಗಳು ನಿಮ್ಮನ್ನು ಮಂಕುಮಾಡಿ ನಿಮ್ಮ ಜನನೇಂದ್ರಿಯದ ಕೂಡ ಆಟ ವಾಡಿ ನಿಮ್ಮನ್ನು ಹಾಳುಮಾಡಿ ಬಿಡುವರು. ಆದುದರಿಂದ ಅಂತವರ ಸಹವಾಸದಿಂದ ನೀವು ದೂರಿರುವದು ನೆಟ್ಟಗೆ.

ಪ್ರಾಣಿಗಳು ತಮ್ಮ ಸಹಜ ಪ್ರವೃತ್ತಿಗಳನ್ನು ಕುರುಡನಂತೆ ವಿಚಾರಿಸದೆ ಹಿಂಬಾಲಿಸುವದನ್ನು ನೀವು ಕಂಡಿರಬಹುದು. ಉದಾ ಹರಣೆಗಾಗಿ ಹಸಿದ ನಾಯಿಯ ಮುಂದೆ ಆಹಾರವನ್ನು ಇಟ್ಟಲ್ಲಿ ಅದು ತತ್‌ಕ್ಷಣವೇ ಆಹಾರವನ್ನು ನುಂಗಿಬಿಡುವದು ಆದರೆ ಮನುಷ್ಯನಲ್ಲಿ ವಿವೇಚನಾ ಸ್ವಾತಂತ್ರ್ಯವಿದೆ. ಅವನು ಹಸಿದಿದ್ದರೂ ಕೊಟ್ಟ ಆಹಾರವನ್ನು ತ್ಯಜಿಸಲು ಸಿದ್ಧನಿರುವನು. ಅದೇ ರೀತಿಯಲ್ಲಿ ಆತನು ಒಳಿತನ್ನು ಮಾಡುವದಕ್ಕೂ ಸಮರ್ಥನು. ತನ್ನ ಸಹಜ ಪ್ರವೃತ್ತಿಗಳನ್ನು ಚಿರಕಾಲದ ಸ್ವರ್ಗಲೋಕದ ಸುಖಕ್ಕಾಗಿ ಉಪ ಯೋಗಿಸಿಕೊಳ್ಳುವದು ಅತ್ಯಗತ್ಯ. ಅದಕ್ಕಾಗಿ ದೇವರು ಪ್ರತಿಯೊಬ್ಬ ಮಾನವನ ಮುಂದೆ ಯೋಗ್ಯವಾದ ಯೋಜನೆಗಳನ್ನು ಇಟ್ಟಿರುವನು.

ಈ ಯೋಜನೆಯು ಹೆಚ್ಚಿನಂಶ ಮಾನವನ ಸಹಜ ಪ್ರವೃತ್ತಿಗಳು ನೇರವೇರಿಸುತ್ತವೆ. ಉದಾಹರಣೆಯಾಗಿ ಹಡಗುನಾಶದಿಂದ ಸಮುದ್ರಪಾಲಾದ ಜನರು ಹೇಗೆ ತಮ್ಮ ಸಂರಕ್ಷಣೆಯ ಸಹಜ ಪ್ರವೃತ್ತಿಯಿಂದ ನೀರಿನೋಟದೊಂದಿಗೆ ಸೆಣಸಾಡಿ ಕೈಗೆ ಸಿಕ್ಕಿದ್ದನ್ನು ಹಿಡಿದು ದಡಸೇರುವ ಪ್ರಯತ್ನವನ್ನು ಮಾಡುವದಿಲ್ಲ? ಸ್ವರಕ್ಷಣೆಯ ಪ್ರವೃತ್ತಿಯು ಆತನ ಪ್ರಾಣವನ್ನು ಉಳಿಸುವಂತೆ ಸಹಕಾರಿಯಾಗುವದು. ಇದೇ ರೀತಿ ಮನುಷ್ಯನಲ್ಲಿ ಹಲವಾರು ಸಹಜ ಪ್ರವೃತ್ತಿ ಅಥವಾ ಹುಟ್ಟು ಗುಣಗಳಿವೆ. ಇವುಗಳಲ್ಲಿ ಹಸಿವು ಮತ್ತು ಲೈಂಗಿಕಾಭಿಲಾಶೆಗಳು ಅತಿ ಬಲಿಷ್ಠವಾದವುಗಳೆಂದು ಹೇಳಬಹುದು.

ಮನುಷ್ಯನಲ್ಲಿ ಹಸಿವೆಂಬ ಪ್ರವೃತ್ತಿಯನ್ನು ದೇವರು ಕೊಡಲು ಮುಖ್ಯ ಕಾರಣ, ಆತನು ಮರಣಹೊಂದಬಾರದೆಂದು. ಮನುಷ್ಯನಿಗೆ ಹಸಿವೆಯೇ ಇಲ್ಲವಾದರೆ ಹಲವು ಸೋಮಾರಿಗಳು ಯಾವತ್ತೂ ಕೆಲಸ ಮಾಡದೆ ಇದ್ದು ಬಿಡುತ್ತಿದ್ದರು. ಕ್ರಮೇಣ ಅವರಿಗೆ ಆಹಾರ ಪದಾರ್ಥಗಳೇ ಇಲ್ಲದಂತಾಗಿ ಬಿಡುತ್ತಿದ್ದವು. ಅವರ ದೇಹಗಳು ಕ್ಷೀಣವಾಗಿ ಬಲಹೀನತೆಯಿಂದ ಅವರು ಬೇಗನೆ ಸತ್ತುಹೋಗಿ ಬಿಡುತ್ತಿದ್ದರು. ಆಹಾರವು ನಮ್ಮ ದೇಹದಲ್ಲಿ ಶಕ್ತಿಯನ್ನು ಉಂಟು ಮಾಡುತ್ತಿದೆಯೆಂದು ನೀವು ವಿಜ್ಞಾನ ಪಾಠದಲ್ಲಿ ಕಲಿತಿರುವಿರಿ. ಹೀಗೆ ಹಸಿವು, ಮನುಷ್ಯನು ಆಹಾರ ತೆಗೆದುಕೊಂಡು ತನ್ನ ಪ್ರಾಣವನ್ನೂ ಶಕ್ತಿಯನ್ನೂ ಬೆಳೆಸಬೇಕೆಂದು ಎಚ್ಚರಿಸುತ್ತದೆ. ಇದು ಮಾತ್ರವಲ್ಲದೆ, ಆಹಾರ ತಿನ್ನುವದು ಎಂದಿಗೂ ಕಷ್ಟಕರವಾದ ಕೆಲಸವಲ್ಲ. ಅವನ್ನು ತೆಗೆದುಕೊಳ್ಳಲು ಹಸಿದ ಮನುಷ್ಯನಿಗೆ ಯಾರೂ ಒತ್ತಾಯಪಡಿಸುವದಿಲ್ಲ. ಆತನು ತಾನಾಗಿಯೇ ಹೊಟ್ಟೆ ತುಂಬಿಸಿಕೊಳ್ಳುವನು. ನಿನ್ನ ಅಚ್ಚುಮೆಚ್ಚಿನ ಆಹಾರ ಪದಾರ್ಥದ ಬಗ್ಗೆ ಯೋಚಿ

ಸಮಯಾಗ ನಿನ್ನ ಬಾಯಲ್ಲಿ ನೀರು ಬರುವದನ್ನು ನೀನು ಅನುಭವಿಸಿರ ಬಹುದು. ದೇವರು ಮನುಷ್ಯನಲ್ಲಿ ಹಸಿವೆಯೆಂಬ ಸಹಜ ಪ್ರವೃತ್ತಿ ಯನ್ನು ಹಾಕಿದ್ದು ಮಾತ್ರವಲ್ಲ, ಆಹಾರ ತಿನ್ನುವದರಲ್ಲಿ ಕೂಡ. ಒಂದು ಬಗೆಯ ಸಂತೋಷವನ್ನೂ ಅವನು ಕೂಡಿಸಿರುವನು. ಆದು ದರಿಂದಲೇ ನಾವು ಹಲವು ಬಾರಿ ನಮ್ಮ ಮೆಚ್ಚಿನ ಆಹಾರವನ್ನು ತುಂಬಾ ಆನಂದದಿಂದ ಉಣ್ಣುವೆವು. ಆದರೆ ಈ ಆಹಾರದ ಆಶೆಯು ತಪ್ಪು ಎಂದು ತಿಳಿದುಕೊಳ್ಳಬಾರದು. ಅದೇ ರೀತಿ ಮಿತಿ ಮೀರಿ ಉಂಡರೆ ಕೆಡುಕಿದೆಯೆಂದೂ ಅರಿತಿರಬೇಕು. ಹೀಗೆ ಹಸಿವೆ ಇಲ್ಲದೆ ಅಥವಾ ಹೊಟ್ಟೆ ತುಂಬಿದ ಮೇಲೆಯೂ ಒಂದು ಆಹಾರವು ರುಚಿಕರವಾಗಿದೆಯೆಂದು ಅದನ್ನು ಬಾಯೊಳಗೆ ತುರುಕಿಸಿ-ಕೊಳ್ಳುವದು ಅವಮಾನಕರವಾದುದು.

ಇದೇ ರೀತಿಯಾಗಿ ಮನುಷ್ಯನಿಗೆ ಸರ್ವೇಶ್ವರನು ಲೈಂಗಿಕ ಅಭಿಲಾಷೆಯನ್ನೂ ಕೊಟ್ಟಿರುವನು. ಅದೂ ಕೂಡ ಒಂದು ಸಹಜ ಪ್ರವೃತ್ತಿ. ಅದರಹೊರತು ಮಾನವ ಕುಲವು ಅಳಿದು ಹೋಗುವದು. ಈ ಅಭಿಲಾಷೆ ಇಲ್ಲದಿದ್ದರೆ ಹಲವರು ವಿವಾಹವಾಗುತ್ತಿದ್ದಿಲ್ಲ. ಸಾಮಾನ್ಯ ಕಾರಣವೇನೆಂದರೆ ಮಕ್ಕಳ ಪಾಲನೆ-ಪೋಷಣೆ ಮಾಡುವ ಕೆಲಸವು ತುಂಬಾ ಪ್ರಯಾಸಕರವೆಂದು. ಮನುಷ್ಯನು ಮದುವೆ ಯಾಗಿ ಸಂತಾನಾಭಿವೃದ್ಧಿ ಮಾಡಬೇಕೆಂದೇ ದೇವರು ಅವನಿಗೆ ಈ ಅಭಿಲಾಷೆಯನ್ನು ಕೊಟ್ಟಿರುವನು. ಆದರೆ ಈ ಅಭಿಲಾಷೆಗೆ ಮೂರು ಪದರುಗಳಿವೆ— ಎಂದು ನಾವು ಹೇಳಬಹುದು. ಆಧ್ಯಾ-ತ್ಮಿಕ ಸಹಜ ಪ್ರವೃತ್ತಿ, ಸಂತಾನಾಭಿವೃದ್ಧಿ ಸಹಜ ಪ್ರವೃತ್ತಿ ಹಾಗೂ ಪ್ರಾಣಿಮಾತ್ರದ (ಪಾಶವಿಕ) ಸಹಜ ಪ್ರವೃತ್ತಿ.

ವಿವಾಹವಾದವರು ಸಂತಾನಾಭಿವೃದ್ಧಿಗಾಗಿ ತಮ್ಮ ಜನನೇಂದ್ರಿಯ ಗಳನ್ನು ಸುಖಾಭಿಲಾಷೆಯೊಡನೆ ಉಪಯೋಗಿಸುವದು ದೈವೇಚ್ಛೆ. ಮತ್ತದು ನೈತಿಕವಾಗಿ ಸರಿ. ಇದೇ ಸುಖಾಭಿಲಾಷೆಯ ಸಹಜ ಪ್ರವೃತ್ತಿಯು ಪ್ರತಿಯೊಬ್ಬ ತರುಣನಲ್ಲಿಯೂ ಉಂಟಾಗುತ್ತದೆ. ಆ ಅಂತಸ್ತಿನಲ್ಲಿ ಈ ಪ್ರವೃತ್ತಿಯ ಶಕ್ತಿಯು ಬಹಳವಾದುದು. ಒಬ್ಬ ದೇಹಶಾಸ್ತ್ರಜ್ಞನು ಅದನ್ನು ನೆರೆಗೆ ಹೋಲಿಸುತ್ತಾನೆ. ಈ ಸಂಧಿಗ್ಧ ಪರಿಸ್ಥಿತಿಯಲ್ಲಿ ನಮ್ಮ ಸಂಯಮನದ ಅಗತ್ಯ ತುಂಬಾ ಇದೆ. ಈ ಸಹಜ ಪ್ರವೃತ್ತಿಯನ್ನು ಹತೋಟಿಯಲ್ಲಿ ಇಟ್ಟರೆ ಅದು ಬಹಳ ಉತ್ತಮ. ಮತ್ತು ಪ್ರಯೋಜನಕಾರಿಯಾಗುವದು. ಅದನ್ನು ಸಡಿಲು ಬಿಟ್ಟರೆ ನಮ್ಮ ಇಡೀ ಜೀವನವನ್ನೇ ಹಾಳು ಮಾಡುವ ಶಕ್ತಿಯು ಅದಕ್ಕಿದೆ. ಈ ಹತೋಟಿಯಲ್ಲಿ ಇಡುವ ಕಾರ್ಯವನ್ನು ನಾವು ನಮ್ಮ ದೇಶದಲ್ಲಿನ ಹಲವಾರು ನೀರಾವರಿ ಯೋಜನೆಗಳಿಗೆ ಹೋಲಿಸಬಹುದು.

ಆಣೆಕಟ್ಟುಗಳನ್ನು ಕಟ್ಟಿ ನೀರನ್ನು ಕೃಷಿಗಾಗಿ ಅಥವಾ ವಿದ್ಯುಚ್ಛಕ್ತಿಗಾಗಿ ಉಪಯೋಗಿಸಿಕೊಳ್ಳಲಾಗುವದು. ಆಗ ಮಾತ್ರ ನೀರಿನ ಉಪಯೋಗ ನಮಗೆ ತಿಳಿಯುತ್ತದೆ. ಆದರೆ ನೆರೆಹಾವಳಿ ಯಲ್ಲಿ ಅಥವಾ ಬಾಂಬಿನ ದಾಳಿಯಲ್ಲಿ ಆಣೆಕಟ್ಟು ನಾಶವಾದಾಗ ಅದರಿಂದಾಗುವ ಹಾವಳಿಯನ್ನು ಮನಗಾಣುವೆವು. ಕಳೆದ ಯುದ್ಧದಲ್ಲಿ ಹಾಗೆ ಹಲವು ಆಣೆಕಟ್ಟುಗಳು ನಾಶವಾಗಿ ಹಲವು ಮನೆ–ಮಠ–ಜಾನುವಾರು ಮತ್ತು ಮನುಷ್ಯ ಜೀವಗಳೂ ನಾಶ ವಾದವು. ಅಲ್ಲಿ ನೀರಿನ ಉಪಯೋಗವು ಮನುಷ್ಯನಿಂದ ಮಾಡಲ ಸಾಧ್ಯವಾಯಿತು. ಅದರ ಶಕ್ತಿಯು ಮನುಷ್ಯನ ಶಕ್ತಿಯನ್ನು ಮೀರಿ ಹೋಯಿತು.

ಇದೇ ಪ್ರಸಂಗವು ನಮ್ಮ ಲೈಂಗಿಕ ಸಹಜ ಪ್ರವೃತ್ತಿಯಲ್ಲಿ ಬರುವದು. ನೀನದನ್ನು ಹಿಡಿತದಲ್ಲಿಟ್ಟರೆ ಅದು ನಿನಗೆ ಹಾಗೂ ನಿನ್ನ ಮಕ್ಕಳಿಗೆ ಪ್ರಯೋಜನಕಾರಿಯಾಗುವದು. ನಿನ್ನ ನಿರ್ಬಂಧ ತಪ್ಪಿದರೆ ಅದು ನಿನ್ನ ದೇಹ ಹಾಗೂ ಆತ್ಮಗಳಿಗೆ ಹೇಳಲಸಾಧ್ಯವಾದ ಕೆಡುಕನ್ನು ಉಂಟುಮಾಡುವದು.

ಜನನೇಂದ್ರಿಯದ ಸದುಪಯೋಗವನ್ನು ನ್ಯಾಯಬದ್ಧವಾಗಿ ವಿವಾಹವಾದ ಸತಿಪತಿಯರಿಗೆ ಕೊಟ್ಟಿರುವರೆಂದು ಈ ಮೊದಲೇ ನೀವು ತಿಳಿದಿರುವಿರಿ. ಆದರೆ ಅವುಗಳ ದುರುಪಯೋಗವು ಎಲ್ಲ ರಲ್ಲಿಯೂ– ವಿವಾಹವಾದ ಹಾಗೂ ವಿವಾಹವಾಗದವರಲ್ಲಿ ನಿಷೇಧಿಸ ಲಾಗಿದೆ. ಹೀಗೆ ವಿವಾಹವಾಗದ ಇಬ್ಬರು, ಕಾಮವಿಕಾರಕ್ಕೋಳಗಾಗಿ ಜನನೇಂದ್ರಿಯುಗಳನ್ನು ಉಪಯೋಗಿಸಿಕೊಂಡರೆ ಅದು ನಿಜವಾಗಿ ದುರುಪಯೋಗ ಮಾಡಿದಂತೆ. ಅದೇ ರೀತಿಯಲ್ಲಿ ವಿವಾಹವಾದ ಒಬ್ಬನು ತನ್ನ ಪತ್ನಿಯ ಹೊರತು ಇನ್ನೊಬ್ಬ ಮದುವೆಯಾದ ಅಥವಾ ಮದುವೆಯಾಗದ ಸ್ತ್ರೀಯೊಡನೆ ಸಂಭೋಗ ಮಾಡುವದೂ ದೊಡ್ಡ ತಪ್ಪು. ಇದೇ ನಿಯಮ ಸ್ತ್ರೀಗೂ ಅನ್ವಯಿಸುವದು. ಹೀಗೆ ಮಾಡುವದರಲ್ಲಿ ಜನನೇಂದ್ರಿಯಗಳನ್ನು ಪ್ರಕೃತಿ ನಿಯಮಕ್ಕೆ ಸರಿ ಯಾಗಿ ಉಪಯೋಗಿಸಲಿಲ್ಲ. ಬದಲು ಅವುಗಳ ದುರುಪಯೋಗ ಮಾಡಿದಂತಾಗುವದು. ಆದುದರಿಂದ ಇದು ಮಹಾ ಪಾಪ.

ಯುವಕರು ಯಾವ ರೀತಿಯಲ್ಲಿ ಲೈಂಗಿಕ ದುರುಪಯೋಗ ವನ್ನು ಮಾಡಿಕೊಳ್ಳುವರೆಂಬುದನ್ನು ಯೋಚಿಸುವ. " ನಾನು ಪರಿಶುದ್ಧತೆ ಎಂಬ ಸುಗುಣಕ್ಕೆ ವಿರೋಧವಾಗಿ ಪಾಪ ಮಾಡಿರು ವೆನು " ಎಂದು ಒಬ್ಬ ತರುಣನು ಬಂದು ಹೇಳಿದರೆ ನಾನೇನು

ಅರ್ಥಮಾಡಿಕೊಳ್ಳುವದು ? ಇದರಲ್ಲಿ ಪಾಪ ಎಲ್ಲಿದೆ ? ಇದರಲ್ಲಿ ನೀನು ಮಾತ್ರವಲ್ಲದೆ ನಿನ್ನ ಸ್ನೇಹಿತರೂ ಪಾಲುಗಾರರಾಗಿರಬಹುದು. ಹುಡುಗರು ತಮ್ಮ ಲಿಂಗಗಳನ್ನು ಹಿಡಿದು ಮುಟ್ಟಿ ಸವರಿ ಅವುಗಳಿಂದ ದ್ರವಪದಾರ್ಥವಾದ ವೀರ್ಯವನ್ನು ನಿರ್ಗಮಿಸುವಷ್ಟು ಉದ್ರೇಕಿಸಿದರೆ ಅಂತಹ ಕೆಟ್ಟ ಕಾರ್ಯಕ್ಕೆ ಸ್ವದುರುಪಯೋಗದ ಪಾಪವೆಂದು ಹೆಸರು. ಆದರಿಂದ ಹುಡುಗನು ತನ್ನನ್ನು ತಾನೇ ಹಾಳು ಮಾಡಿಕೊಳ್ಳುತ್ತಾನೆ. ಅಪವಿತ್ರಗೊಳಿಸಿಕೊಳ್ಳುತ್ತಾನೆ. ಅವನು ತನ್ನ ಪುರುಷತ್ವದ ವಿರೋಧ ಅಪರಾಧವನ್ನು ಮಾಡುವನು. ತನ್ನನ್ನು ಸಂಯಮದಲ್ಲಿಟ್ಟುಕೊಂಡು ಆ ಶಕ್ತಿಯನ್ನು ತನ್ನ ದೇಹ ದಾರ್ಢ್ಯತೆಗೆ ಉಪಯೋಗಿಸುವ ಬದಲು ತನ್ನ ಬಲಸಾಮರ್ಥ್ಯವನ್ನು ಅನಾವಶ್ಯಕ ವ್ಯರ್ಥಮಾಡಿ ತನ್ನನ್ನು ತಾನೇ ಕ್ಷೀಣ ಮಾಡಿಕೊಳ್ಳುವನು. ಶೇಖರಿಸಲ್ಪಟ್ಟ ಜೀವಧಾತುಗಳು ಮನುಷ್ಯನ ದೇಹವನ್ನು ಸೇರಿ ಅವನ ಶರೀರ ಬೆಳವಣಿಗೆಗೆ ಸಹಾಯಕವಾಗುವವೆಂದು ವೈದ್ಯರು ಅಭಿಪ್ರಾಯ ಪಡುವರು. ವೀರ್ಯದ ಎಲ್ಲಾ ಅಂಶವು ಹಾಗೆ ಆಗದಿದ್ದರೂ ಸ್ವಲ್ಪಾಂಶವಾದರೂ ಹಾಗೆ ಆಗುವದು ಖಂಡಿತ. ಉಳಿದ ಅಂಶವು ಮೊದಲೇ ತಿಳಿಸಿದಂತೆ ಇರುಳ ವಿಸರ್ಜನೆಯ ಮೂಲಕ ದೇಹದಿಂದ ಹೊರಗೆ ನಿರ್ಗಮಿಸಲ್ಪಡುವದು.

ಎಂದಿಗೂ ಈ ವಿಷಯದಲ್ಲಿ ನಿನ್ನ ಸಂಗಾತಿಗಳ ಅಲ್ಲಸಲ್ಲದ ಮಾತುಗಳನ್ನು ಕೇಳಬೇಡ. ಯಾವಾಗಲೂ ಸ್ವದುರುಪಯೋಗದ ದುಷ್ಕೃತ್ಯವನ್ನು ಮಾಡುವ ಹುಡುಗನು ಮಂದಮತಿ, ಉದಾಸೀನನಾಗಿರುವನು. ತನ್ನ ಸ್ವಂತ ಕೆಲಸದಲ್ಲಾಗಲೀ, ಇತರರ ಕಾರ್ಯಗಳಲ್ಲಾಗಲೀ, ಏಕಾಗ್ರತೆಯನ್ನು ಪಡೆಯುವದು ಅವನಿಂದ ಅಸಾಧ್ಯವಾಗುವದು. ಓದುವದರಲ್ಲಿ ಅವನು ಹಿಂದು ಬೀಳುವನು. ಆಟ–

ಪಂದ್ಯಾಟಗಳಲ್ಲಿ ಅಭಿರುಚಿ ಕಡಿಮೆಯಾಗಿ ಸೋಮಾರಿಯಾಗುವನು. ದಿನದಿಂದ ದಿನಕ್ಕೆ ಅವನ ದೇಹದಾರ್ಢ್ಯವು ಕಡಿಮೆಯಾಗಿ ಕ್ಷೀಣ ದೆಸೆಯನ್ನು ಹೊಂದುವದು,

ಈ ದೈಹಿಕ ಕೊರತೆಗಳಲ್ಲದೆ ಅವನು ಬಹುಬೇಗನೆ ನೈತಿಕ ಹೀನಾವಸ್ಥೆಗೆ ಬಿದ್ದುಬಿಡುವನು. ಪ್ರಯತ್ನಪಟ್ಟು ಆ ಅಭ್ಯಾಸವನ್ನು ಬಿಟ್ಟುಬಿಡಲು ಸಾಹಸ ಮಾಡದವನು ದಿನ ಕಳೆದಂತೆ ದೊಡ್ಡ ದೊಡ್ಡ ಪಾಪಕಾರ್ಯಗಳಿಗೆ ಒಳಗಾಗುವನು. ಅವನು ತನ್ನ ಅಮೂಲ್ಯ ಆತ್ಮದ ನಾಶಕ್ಕೆ ಕಾರಣನಾಗಿ ತನ್ನ ಜೀವಮಾನವನ್ನೇ ಹಾಳು ಮಾಡಿಕೊಳ್ಳುವನು.

ಹೀಗೆ ಆಗುವ ಮುನ್ನ ಅವನಲ್ಲಿ ಒಂದು ಆಂತರಿಕ ಕಾಳಗವು ನಡೆಯುವದು. ಕೆಟ್ಟ ಕೆಲಸಗಳನ್ನು ಮಾಡುವಾಗ ಅಥವಾ ಮಾಡ ಲಿಚ್ಛಿಸುವಾಗ ಅವನ ಅಂತಃಕರಣವು ಅವನನ್ನು ಹಿಂದಕ್ಕೆಳೆ ಯುವದು. ಆದರೆ ಕಾಮವಿಕಾರಕ್ಕೊಳಗಾಗಿ ಅವನು ಆ ಅಶರೀರ ವಾಣಿಗೆ ಕಿವಿಗೊಡದೆ ಮುನ್ನುಗ್ಗುವನು. ತನ್ನನ್ನು ತಾನೇ ದುರುಪ ಯೋಗ ಮಾಡಿದಂತೆ, ಅವನಲ್ಲಿ ನಿರುತ್ಸಾಹ, ಖಿನ್ನತೆ, ಕೊರಗುವಿಕೆ ಗಳು ಉಂಟಾಗುವವು. ಇತರರಿಂದ ತಾನು ಕೆಳಮಟ್ಟದವನು-ಕೀಳು ಎಂಬ ಭಾವನೆಯು ಅವನ ಮನಸ್ಸನ್ನು ಕೊರೆಯುವದು. ನರಗಳ ಶಕ್ತಿಯು ಕುಸಿದು ಬಿದ್ದು ಅವನ ಆರೋಗ್ಯವು ಕೆಟ್ಟು ಹೋಗುವದು.

ಆದರೆ ಇಂತಹ ದುಃಖದ ದುಃಸ್ಥಿತಿ ಬರುವ ಮೊದಲು ನಾವು ಜಾಗ್ರತೆ ವಹಿಸಬೇಕು. ಮುರಿಯಲು ಅಸಾಧ್ಯವಾದ ದುರ್ಗುಣಕ್ಕೆ ಒಳಗಾಗೆರುವೆವೆಂದೂ ಅದರಿಂದ ಹೊರಬರಲು ಅಸಾಧ್ಯವೆಂದೂ

ತಪ್ಪು ಕಲ್ಪನೆಯನ್ನು ಮಾಡಿಕೊಳ್ಳುವ ಹುಡುಗರು ಬಹಳ ಜನ ರಿದ್ದಾರೆ. ಇದು ನಿಜವಾಗಿ ಸುಳ್ಳುವಾದ. ಯಾಕಂದರೆ ಸಾಧಿಸಿದರೆ ಸಬಳ ನುಂಗಬಹುದೆಂಬ ಹಿರಿಯರ ನಾಣ್ಣುಡಿಯಂತೆ ದೇವರ ಸಹಾಯದಿಂದ ನಾವು ಎಂತಹ ಕೆಟ್ಟ ಅಭ್ಯಾಸದಿಂದಲೂ ಪಾರಾಗ ಬಹುದು. ಒಂದೇ ಒಂದು ವಸ್ತುವಿನ ಅಗತ್ಯವೇನೆಂದರೆ—ನಮ್ಮ ದೃಢ ಪ್ರತಿಜ್ಞೆ. ದೇವರ ಸಹಾಯದಿಂದ ಮತ್ತು ನಿನ್ನ ದೃಢ ಮನಸ್ಸಿನಿಂದ ನೀನದನ್ನು ದೂರ ಮಾಡಬಹುದು. ಪ್ರಯತ್ನಿಸು-ಪ್ರಯತ್ನಿಸು- ಮತ್ತೂ ಪ್ರಯತ್ನಿಸು.

ಒಬ್ಬ ಹುಡುಗನು ಈ ರೀತಿಯಾಗಿ ಒಂದು ಸಲ ನನಗೆ ಬರೆದ—

" ಹದಿನಾಲ್ಕು ವರ್ಷ ಪ್ರಾಯದಲ್ಲಿ ನಾನು ಕೆಟ್ಟ ವರ್ತನೆಗೆ ಬಿದ್ದು ಸ್ವದುರುಪಯೋಗದ ಪಾಪಕ್ಕೆ ಒಳಗಾದೆ ನಿಮ್ಮ ಪುಸ್ತಕ ಗಳನ್ನು ಓದಿದ ಬಳಿಕ ಆ ವಿಷಯದ ಸಂಪೂರ್ಣ ಜ್ಞಾನವು ನನಗೆ ಬಂದಿತು. ಹಲವು ವರ್ಷಗಳಿಂದ ನನ್ನನ್ನು ನಾನೇ ದುರುಪಯೋಗ ಗೊಳಿಸುವದನ್ನು ನಿಲ್ಲಿಸಲೆತ್ನಿಸಿದೆ. ಪ್ರತಿದಿನ— ಪ್ರತಿ ಗಳಿಗೆ ನನ್ನ ಪ್ರಯತ್ನವನ್ನು ಹೆಚ್ಚಿಸಿದೆ. ಆ ಕೆಟ್ಟ ಕೆಲಸವನ್ನು ಮಾಡಲು ಮನ ಬಂದಾಗ ಕಥೆ ಪುಸ್ತಕ ಓದಲು, ಆಟವಾಡಲು ಅಥವಾ ಪ್ರಾರ್ಥನೆ ಮಾಡಲು ತೊಡಗಿದೆ. ಕೆಲವು ಉಪವೃತ್ತಿಗಳನ್ನು ಕೈಕೊಂಡೆ. ಕಟ್ಟಕಡೆಗೆ ದೇವರ ಸಹಾಯದಿಂದ ಆ ದುಷ್ಟಚಾಳಿಯಿಂದ ಪಾರಾದೆ. ಈಗ ನಾನು ಹಸನ್ಮುಖಿಯಾಗಿದ್ದೇನೆ. ಏನೂ ಗಾಬರಿ-ಕಳವಳ ವಿಲ್ಲದ ವ್ಯಕ್ತಿಯಾಗಿದ್ದೇನೆ. "

ಎಂತಹ ದುರಭ್ಯಾಸವನ್ನಾದರೂ ನಾವು ಬಿಟ್ಟು ಬಿಡಬಹುದು. ಪರಿಶುದ್ಧತೆಯಿಂದ ಇರಬೇಕಾದರೂ ಧೀರತನ ಮತ್ತು ಸಂಯಮ

ಅಗತ್ಯ. ಇಂತಹ ಸಂಯಮವು ನಿಜವಾಗಿ ಹುಡುಗರನ್ನು ಧೀರೋದಾತ್ತರನ್ನಾಗಿ ಮಾಡುವದು.

ಯುದ್ಧ ಮಾಡದೆ ವಿಜಯ ದೊರಕುವದೇ ? ಇಲ್ಲ. ನಾನು ನನ್ನ ದುಷ್ಕೃತ್ಯಗಳನ್ನು ಬಿಟ್ಟುಬಿಡುವೆನು ಎಂದು ಒಂದಾವರ್ತಿ ದೃಢ ನಿಶ್ಚಯ ಮಾಡಿದರೇನೇ ಸಾಲದು. ನಾನು ದಿನಂಪ್ರತಿ ನನ್ನ ಕೆಟ್ಟ ಆಚಾರ-ವಿಚಾರ-ಅಭ್ಯಾಸಗಳ ಮೇಲೆ ಯುದ್ಧ ಹೂಡಬೇಕು. ದಿನ ಹೋದಂತೆ ಯುದ್ದವು ಕಠಿಣಕರವಾಗುವದು. ಇದರಿಂದ ಸೆಣಸ್ಯಾಟವನ್ನು ನಿಲ್ಲಿಸಿ ನಿರಾಶರಾಗಬೇಕಾದುದಿಲ್ಲ.

ಮತ್ತೊಂದು ಮುಖ್ಯ ವಿಷಯವೇನೆಂದರೆ ಕೆಲವು ಹುಡುಗರಿಗೆ ಬರೇ ಪಾಪ-ಮೋಹ ಪ್ರೇರಣೆ ಮತ್ತು ಒಪ್ಪಿಗೆ ಕೊಡುವದು ಈ ಎರಡು ಪ್ರತ್ಯೇಕ ವಿಷಯಗಳನ್ನು ವಿಂಗಡಿಸುವದು ಕಷ್ಟಕರವಾಗಿ ಬಿಡುತ್ತದೆ. ನಿನಗೆ ಪರಿಶುದ್ಧತೆ ಅಥವಾ ಬೇರೆ ಯಾವ ಸದ್ಗುಣದ ವಿರೋದ ಪ್ರಲೋಭನೆಗಳು ಬರುವದರಲ್ಲಿ ನಿನ್ನದೇನೂ ತಪ್ಪಿಲ್ಲ. ನೀನು ಯಾವ ಪಾಪಕ್ಕೂ ಒಳಗಾಗುವದಿಲ್ಲ. ಅಂತಹ ಕೆಟ್ಟ ಪ್ರೇರಣೆಗಳು ಎಲ್ಲರಿಗೂ ಬರುತ್ತಿವೆ. ನಿನ್ನ ದೃಢಸಂಕಲ್ಪ-ವಿವೇಚನಾಪರ ಜಾಗರೂಕತೆ ಇವೆಲ್ಲವುಗಳು ಇದ್ದರೂ ನಿನಗೆ ಪಾಪದ ಪ್ರೇರಣೆಗಳು ಬಂದೇ ಬರುವವು. ಆದರೆ ಅವುಗಳ ಸಂಪೂರ್ಣ ಜ್ಞಾನವಿದ್ದು, ಉದ್ದೇಶಪೂರ್ವಕವಾಗಿ ಅವುಗಳಿಗೆ ನೀನು ಅನುಮತಿಯನ್ನು ಇತ್ತರೆ ಮಾತ್ರ ಅಪರಾಧ. ಆದುದರಿಂದ ಇಂಥ ಪ್ರೇರಣೆಗಳು ಬಂದಾಗ ನೀನು ಗಾಬರಿಪಡಬೇಕೆಂದಿಲ್ಲ. ಯೋಗ್ಯ ಜಾಗ್ರತೆವಹಿಸಿ ದೇವರಲ್ಲಿ ಸಂಪೂರ್ಣ ನಂಬಿಕೆ ಇರಿಸಿ ಮೇಲೆ ಹೇಳಿದ ಉಪಾಯಗಳನ್ನು ಪ್ರಯೋಗಿಸಿ ಶಾಂತಚಿತ್ತನಾಗಿ ಇದ್ದು ಬಿಡುವದೇ ಲೇಸು.

ಮತ್ತೊಂದು ಮುಖ್ಯ ವಿಷಯವೇನೆಂದರೆ ಪ್ರೇರಣೆಗಳು ಬಂದಾಗ, ಯಾವ ರೀತಿಯಿಂದ ವರ್ತಿಸಬೇಕೆಂದೂ, ಯಾವ ಉಪಾಯಗಳನ್ನು ಬಳಸಬೇಕೆಂದೂ ಹಲವು ತರುಣರಿಗೆ ತಿಳಿಯದು. ಸಾಮಾನ್ಯ ಮತ್ತು ಸ್ವಾಭಾವಿಕ ಉಪಾಯಗಳಲ್ಲಿ ಚಿತ್ತಭ್ರಮಣೆಯು ಒಂದು. ಜನನೇಂದ್ರಿಯದ ನರಗಳು ಮಿದುಳಿಗೆ ಸಂಬಂಧಿಸಿವೆ ಎಂದು ವಿಜ್ಞಾನ ಪಾಠದಲ್ಲಿ ಕಲಿತಿರುವೆ. ಆದುದರಿಂದ ಪ್ರೇರಣೆ ಅಥವಾ ಪ್ರಲೋಭನೆಗಳು ಬಂದಾಗ ನಿನ್ನ ಮನಸ್ಸನ್ನು ಬೇರೆ ಯಾವ ವಸ್ತು ಅಥವಾ ವಿಷಯಗಳ ಕಡೆಗಾದರೂ ಹರಿಸಬೇಕು. ನೀನು ಪಾಠ ಕಲಿಯುತ್ತಿರುವಾಗ ಇಂಥ ಪ್ರೇರಣೆಗಳು ಬಂದರೆ, ಅಲ್ಲಿಂದೆದ್ದು ಆಟದ ಬಯಲಿಗೆ, ಇಲ್ಲವೆ ತೋಟಕ್ಕೆ ಹೋಗಿ ಬಿಡು; ಏಕಾಂಗಿಯಾಗಿ ಇರಬೇಡ. ಬೇರೆ ಹುಡುಗರ ಕೂಡ ಸೇರಿ ಯಾವುದಾದರೂ ಕೆಲಸ ಮಾಡು. ಇದಾಗದಿದ್ದರೆ ಮನಸ್ಸಿನಲ್ಲಾದರೂ ಅಂತಹ ಸನ್ನಿವೇಶಗಳನ್ನು ತಂದುಕೋ.

ಈ ಉಪಾಯಗಳು ಹಗಲು ಹೊತ್ತಿನಲ್ಲಿ ಮಾತ್ರವಲ್ಲ, ಹಾಸಿಗೆಯಲ್ಲಿ ಮಲಗಿರುವಾಗಲೂ ಶ್ರೇಯಸ್ಕರ. ಆದರೆ ರಾತ್ರಿಯ ಹೊತ್ತಾಗಿದ್ದರೆ ಮನೆಬಿಟ್ಟು ಹೊರಗೆ ಹೋಗಬೇಡ. ಒಳ್ಳೆಯ ಕತೆ ಪುಸ್ತಕವನ್ನು ಓದುವದು ಈ ಸಂದರ್ಭದಲ್ಲಿ ಪ್ರಯೋಜನಕಾರಿಯಾದುದು. ಒಂದೇ ಮಾತಿನಲ್ಲಿ ಹೇಳುವುದಾದರೆ, ನಿನ್ನ ಚಿತ್ತವನ್ನು ಕೆಟ್ಟ ಆಲೋಚನೆಗಳಿಂದ ದೂರಕ್ಕಿಡಬೇಕು.

ಸಾಮಾನ್ಯ ಉಪಾಯಗಳಲ್ಲಿ ಮತ್ತೊಂದು ದುರ್ಭೇದನಾದವದು ಎಂದಿಗೂ ಕೋಮಲತೆಗೆ ಎಡೆಕೊಡದಿರುವದು. ಚಿಕ್ಕ ವಯಸ್ಸಿನಿಂದಲೇ ನಿನ್ನನ್ನು ನೀನು ಸಂಯಮದಲ್ಲಿ ಇಟ್ಟುಕೊಳ್ಳ

ವದು. ಗಿಡವಾಗಿದ್ದಾಗ ಬಗ್ಗದಿದ್ದುದು ಮರವಾದ ಮೇಲೆ ಬಗ್ಗೀತೇ ? ಎಂಬ ಗಾದೆಗನುಸಾರವಾಗಿ ಬಾಲ್ಯದಿಂದಲೇ ನಿನ್ನನ್ನು ನೀನು ಹತೋಟಿಯಲ್ಲಿ ಇಟ್ಟುಕೊಂಡಿರಬೇಕು. ನಿನ್ನ ಮನಸ್ಸಿನ ಎಲ್ಲ ಆಕಾಂಕ್ಷೆಗಳನ್ನು ಪೂರೈಸದೆ ಕೆಲವನ್ನು ಬದಿಗೊತ್ತಿ ನಿನ್ನ ಆಶೆ ಅಭಿಲಾಷೆಗಳ ಮೇಲೆ ನಿಯಂತ್ರಣವನ್ನು ಇರಿಸುವವು. ಉದಾಹರಣೆಗೆ— ಪಟ್ಟಣಕ್ಕೆ ಬಂದ ಎಲ್ಲಾ ಚಿತ್ರಪಟಗಳನ್ನು ನೀನು ನೋಡಬೇಕೆಂದಿಲ್ಲ. ಕಂಡ ಕಂಡ ಹಾಟೇಲುಗಳಿಗೆ ಹೋಗಬೇಕೆಂದಿಲ್ಲ. ನೋಡಿದ ಎಲ್ಲಾ ಪುಸ್ತಕಗಳನ್ನೂ ಕಾದಂಬರಿಗಳನ್ನೂ ಓದಬೇಕೆಂದಿಲ್ಲ ಹೀಗೆ ಆಗಾಗ ನಿನ್ನ ಆಶೆಯ ಕಡಿವಾಣವನ್ನು ಬಿಗಿಹಿಡಿದರೆ ನೀನು ಬೇಗನೇ ದುರ್ಭೇದನಾಗುವಿ. ಅಂದರೆ ನಿನ್ನ ಪಂಚೇಂದ್ರಿಯಗಳನ್ನು ನಿನ್ನ ಹತೋಟಿಯಲ್ಲಿಡಲು ಸಮರ್ಥನಾಗುವಿ.

ಈಗಿನ ಕಾಲದಲ್ಲಿ ಹಲವಾರು ವಸ್ತುಗಳು ಮತ್ತು ವಿಷಯಗಳು ನಮ್ಮನ್ನು ವಿಷಯಲಂಪಟತನಕ್ಕೆ ಕೊಂಡೊಯ್ಯುತ್ತಿವೆ. ಹೀಗೆಂದು ದಾರಿಹಿಡಿದು ಹೋಗುವಾಗ ನೀನು ಕಂಣು ಮುಚ್ಚಿ, ಕಿವಿಯಲ್ಲಿ ಬೆರಳುಗಳನ್ನು ಹಾಕಿಕೊಂಡು ನಡೆಯಬೇಕೆಂದೇ ? ಹಾಗೆಂದು ಇದರರ್ಥವಲ್ಲ. ಹಲವು ಬಾರಿ ನೀನು ಕೆಲವೊಂದು ವಸ್ತುಗಳನ್ನು ಕಂಡೂ ಕಾಣದಂತೆ, ಕೇಳಿಯೂ ಕೇಳದಂತೆ ವರ್ತಿಸಬಹುದು. ಆ ವಸ್ತು-ವಿಷಯಗಳು ಕೆಟ್ಟವೆಂದು ತಿಳಿದ ಕೂಡಲೇ ನೀನು ಅವುಗಳಿಂದ ದೂರ ಹೋಗಬೇಕು. ನಿನ್ನ ಮನಸ್ಸನ್ನು ಹಿಂಡಕ್ಕೆಳೆಯಬೇಕು.

ನೀನು ಹೊಗೆ ಬತ್ತಿ ಸೇದುತ್ತಿದ್ದರೆ ಅವುಗಳನ್ನು ಸೇದದೆ ಒಂದೆರಡು ದಿನ ಬಿಟ್ಟು ನೋಡು. ತರುಣಾವಸ್ಥೆಯಲ್ಲಿ ಹುಡುಗರು ಹೊಗೆಬತ್ತಿ ಸೇದಲೇ ಕೂಡದು. ಇಂತಹ ಸಣ್ಣ ವಿಷಯದಲ್ಲಿ ತ್ಯಾಗ ಮಾಡಲು ಶಕ್ತನಾಗದ ಹುಡುಗನು ಲೈಂಗಿಕ ವಿಚಾರಗಳಲ್ಲಿ ತ್ಯಾಗಮಾಡಲು ಸಮರ್ಥನಾಗನು. ಆದುದರಿಂದ ಚಿಕ್ಕಪುಟ್ಟ ವಿಷಯಗಳಲ್ಲಿ ಮೊದಲು ನಿನ್ನ ಮನಸ್ಸಿನ ಆಕಾಂಕ್ಷೆಗಳನ್ನು ಬಿಗಿ ಹಿಡಿದು ಸಂಯಮನವನ್ನು ಮಾಡು. ಆಗ ಮಾತ್ರ ಈ ಕಷ್ಟಕರ ವಿಷಯವೂ ಸುಲಭವಾಗುವದು.

ಮೂರನೆಯ ವಿಷಯ, ನಿನ್ನನ್ನು ನೀನೇ ಯಾವಾಗಲೂ ಒಂದಲ್ಲ ಒಂದು ಕೆಲಸದಲ್ಲಿ ನಿರತನಾಗಿರುವಂತೆ ನೋಡಿಕೊಳ್ಳುವದು. ಈಗ ಜೇನುನೊಣದ ಉದಾಹರಣೆಯನ್ನೇ ತೆಗೆದುಕೋ. ನಿನ್ನ ವಿರಾಮಕಾಲದ ಸದುಪಯೋಗವನ್ನು ಮಾಡು ಕೆಲಸವಿಲ್ಲದ ಆಲಸಿ ಜೀವಿಗೆ ಪ್ರೇರಣೆಗಳು ಬರುವದು ಹೆಚ್ಚು. ಆಟವಾಡುವಾಗ ಆಗಲೀ, ಈಜಾಟ, ಸ್ಟ್ಯಾಂಪ್ಸಗಳನ್ನು ಕೂಡಿಸುವದಾಗಲೀ ಒಳ್ಳೆಯ ಉಪಾಯ.

ಇಷ್ಟೆಲ್ಲ ಹೇಳಿಯಾದ ಬಳಿಕ ಕೆಲವು ಹುಡುಗರು ಹೀಗೆನ್ನ-ಬಹುದು—

"ಇದೆಲ್ಲಾ ಸ್ವಾಮಿಯವರು ಹೇಳುವದೇನೋ ನಿಜ. ಆದರೆ ನನಗೆ ಅದರಲ್ಲಿ ಒಂದೂ ಅನ್ವಯಿಸುವದಿಲ್ಲ. ಎಷ್ಟೇ ಪ್ರಯತ್ನಿಸಿದರೂ ನನಗೆ, ನನ್ನಲ್ಲಿ ಬಂದ ಪ್ರೇರಣೆಗಳನ್ನು ಹೊಡದೋಡಿಸುವದು ಸಾಧ್ಯವಾಗದು. ನಾನು ಪಾಪದಲ್ಲಿ ಬೀಳುವದು ಖಂಡಿತ."

ಈ ಮಾತು ಸರ್ವಥಾ ಸುಳ್ಳು–ಎಂದು ಹೇಳಲು ಸಾಧ್ಯವಿಲ್ಲ. ಯಾಕಂದರೆ ತರುಣರು ವಿವಿಧ ಸ್ವಭಾವದವರು. ನಾನಾ ಬಗೆಯ ನಡುವಳಿಕೆಯುವರು. ಬೇರೆ ಬೇರೆ ಹಿನ್ನೆಲೆಯುಳ್ಳವರು ಇರುವರು. ಎಲ್ಲರಿಗೂ ಒಂದೇ ಬಗೆಯ ಬುದ್ಧಿವಾದವು ಸರಿಹೋಗಲಿಕ್ಕಿಲ್ಲ. ಒಬ್ಬ ಹುಡುಗನು ಪಾಪಕೃತ್ಯದ ವಿಷಯವಾಗಿ ಏನೂ ಅಸಹ್ಯ ತೋರಿಸದೆ ಇರಬಹುದು. ಪ್ರತಿಯೊಂದು ಮೋಹಕ ಪ್ರೇರಣೆಗೆ ಬಲಿಯಾಗಿ ಮನೋವಿಕಾರಕ್ಕೆ ಒಳಗಾಗಬಹುದು. ಇಂತಹ ತರುಣರಿಗೆ ಹಿರಿಯರು ಕಠಿಣವಾದ ಜಾಗ್ರತೆಯ ಸೂಚನೆಯನ್ನು ಕೊಡುವದು ಒಳ್ಳೆಯದು.

ಮೇಲೆ ಹೇಳಿದ ಕೆಟ್ಟ ಪರಿಸ್ಥಿತಿ ನಿನಗೆ ಬಂತೆಂದು ಭಾವಿಸುವ. ಬಾಲ್ಯಾವಸ್ಥೆಯಲ್ಲಿ ಬರೇ ಆಟವಾಡಿ ಕಡೆಗೆ ಈಗ ಕೆಟ್ಟ ಅಭ್ಯಾಸವಾಗಿ ಹೋಯಿತು. ಆದರೆ ಬೇಗನೇ ನೀನು ತಪ್ಪು ಅಭಿಪ್ರಾಯವನ್ನು ಮನಗಂಡು, ನಿನ್ನ ಪಾಪವನ್ನು ಒಪ್ಪಿಕೊಂಡು ಅದನ್ನು ದೂರ ಗೈಯಲು ತುಂಬಾ ಪ್ರಯತ್ನಿಸುವೆ. ಆದರೂ ನಿನ್ನಿಂದ ಅದು ಸಾಧ್ಯವಾಗುವದಿಲ್ಲ. ಎದ್ದಂತೆ ಮತ್ತೂ ಮತ್ತೂ ಬೀಳುತ್ತಿ. ಪ್ರೇರಣೆಗಳ ಹೊರೆಯೇ ನಿನ್ನನ್ನು ಅಮುಕವದು. ಹಲವು ಬಾರಿ ನಿರಾಶೆಯ ಹೊಸ್ತಿಲನ್ನು ನೀನು ಮುಟ್ಟುವಿ.

ಇಂತಹ ಕನಿಕರ ಪರಿಸ್ಥಿತಿಯಲ್ಲಿ ನಿನಗೆ ನನ್ನ ಬುದ್ಧಿವಾದ ವಿಷ್ಟೇ. ಎಂದಿಗೂ ನಿರಾಶನಾಗಬೇಡ. ನಿನ್ನ ಹೋರಾಟವು ವ್ಯರ್ಥವೆಂದು ಭಾವಿಸಬೇಡ. ಹಲವು ನಿರ್ಧಾರಗಳ ನಂತರವೂ ಅನೇಕ ಸಲ ನೀನು ಪಾಪಕ್ಕೆ ಒಳಗಾಗಿರುವೆಯಾದರೂ ಧೈರ್ಯಗುಂದಬೇಡ. ದಿನ ಹೋದಂತೆ ನಿನ್ನಲ್ಲಿ ಸ್ವಲ್ಪವಾದರೂ ಸುಧಾರಣೆಯು ಆಗುವದು.

ತಿಂಗಳಿಗೆ ನಾಲ್ಕೈದು ಸಲ ಬೀಳುವವನು ಈಗೀಗ ಎರಡೇ ಸಲ ಬೀಳತೊಡಗಿರುವೆ. ಸಂತೋಷಪಡು; ಯಾಕಂದರೆ ಸ್ವಲ್ಪವಾದರೂ ಸುಧಾರಣೆಯಾಗಿದೆ. ನಿರ್ಧಾರಗಳ ಬಳಿಕ ನಿರ್ಧಾರ ಮಾಡು. ಹತ್ತಿಪ್ಪತ್ತು ಸಾರಿ ಬಿದ್ದಂತೆ ಹತ್ತಿಪ್ಪತ್ತು ಸಾರಿ ಏಳು. ಎಷ್ಟರ ವರೆಗೆ ನೀನು ಪ್ರಯತ್ನಪಡುವೆಯೋ ಅಷ್ಟರತನಕ ನಿನ್ನಲ್ಲಿ ಪರಿಶುದ್ಧತೆ ಇರುವದು. ಬೇಕಾದ ವಸ್ತುವೆಂದರೆ ದೃಢನಿರ್ಧಾರ ಮತ್ತು ಸತತ ಪ್ರಯತ್ನ. ಆಗಾಗ ಸಂಭವಿಸುವ ಅಪಜಯುಗಳನ್ನು ಗಣನೆಗೆ ತಾರದೆ, ನೀನು ಪ್ರಾಮಾಣಿಕತೆಯಿಂದ ಹೋರಾಡಿದರೆ ನಿನ್ನ ಆಂತರಿಕ ಶಕ್ತಿಯು ಹೆಚ್ಚುವದಲ್ಲದೆ ನಿನ್ನ ಸ್ವಭಾವವು ಅಭಿವೃದ್ಧಿಗೊಳ್ಳುವದು.

ಹಲವು ಬಾರಿ ಯುವಕರು ಹೀಗೆನ್ನುವದಿದೆ— "ನಿಜವಾಗಿ ಈ ಕೆಟ್ಟ ಅಭ್ಯಾಸವು ನನಗೆ ಬೇಡವಾಗಿದೆ. ಆದರೂ ಎಷ್ಟು ಪ್ರಯತ್ನಬಟ್ಟರೂ ಅದರಿಂದ ಪಾರಾಗಲು ಅಸಾಧ್ಯವಾಗಿದೆ." ಮಹಾ ಪಾಪವಾಗಬೇಕಾದರೆ ಮೂರು ಮುಖ್ಯ ವಿಷಯುಗಳ ಅಗತ್ಯವಿದೆ. ೧. ಘನವಾದ ವಿಷಯು. ೨. ಸ್ಪಷ್ಟವಾದ ತಿಳುವಳಿಕೆ ಮತ್ತು ೩. ಪೂರ್ಣ ಸಮ್ಮತಿ. ಈ ಮೂರು ವಸ್ತುಗಳಿಲ್ಲದೆ ಮಹಾಪರಾಧ ವಾಗುವದು. ನೀನು ಪ್ರಯತ್ನಪಟ್ಟು ಹೋರಾಡುವಿಯಾದರೆ ಅಲ್ಲಿ ಎಂದಿಗೂ ಪೂರ್ಣ ಸಮ್ಮತಿ ಇಲ್ಲ. ಆದುದರಿಂದ ಮಹಾಪಾಪವಿಲ್ಲ.

ಒಬ್ಬ ಕೋಪಿಷ್ಠನನ್ನು ತೆಗೆದುಕೊಳ್ಳುವ. ತನ್ನ ಕೋಪವನ್ನು ಪ್ರಯತ್ನಪಟ್ಟು ತಡೆಯುವೆನೆಂದು ಒಂದು ಬೆಳಿಗ್ಗೆ ಅವನು ದೃಢನಿಶ್ಚಯು ಮಾಡುತ್ತಾನೆ ಅದೇ ದಿನ ಸಂಜೆ ಅವನ ಗೆಳೆಯು

ನೊಬ್ಬನು ಬಂದು ಅಲ್ಲಸಲ್ಲದ ಮಾತುಗಳನ್ನಾಡಿ ಅವನಿಗೆ ಕೋಪ ಬರುವಂತೆ ಮಾಡುತ್ತಾನೆ. ಬೆಳಗಿನ ನಿರ್ಧಾರವಿದ್ದರೂ ಅವನು ಕೋಪಗೊಳ್ಳುತ್ತಾನೆ. ಆದರೆ ಮರುಗಳಿಗೆ ತನ್ನ ತಪ್ಪನ್ನು ಒಪ್ಪಿ ಕೊಳ್ಳುತ್ತಾನೆ. ಇದೇ ರೀತಿ ಪರಿಶುದ್ಧತೆಯ ವಿರೋಧ ನಡೆಯು ವದು. ಪ್ರಯತ್ನಪಟ್ಟರೂ ಪ್ರೇರಣೆಗಳು ಬರುವವು. ಇಂಥ ತಪ್ಪುಗಳು ನಿನ್ನಲ್ಲಿ ಇವೆ ಎಂದು ನೀನು ಚಿಂತಿಸಬಾರದು. ನಿನ್ನ ಮುಖವನ್ನು ಇತರರು ನೋಡಿ ನೀನು ಕೆಟ್ಟ ಹುಡುಗನೆಂದು ಭಾವಿ ಸುವರೆಂದು ಹೆದರಬೇಡ.

# ನೀನು ಮತ್ತು ಹುಡುಗಿಯರು

ಬಾಲ್ಯಾವಸ್ಥೆಯಿಂದಲೂ ಹುಡುಗ–ಹುಡಿಗೆಯರು ಇದ್ದಾರೆಂಬ ಜ್ಞಾನವು ನಿನಗಿತ್ತೇನೊ ನಿಜ. ಆದರೆ ಆ ವಿಷಯವಾಗಿ ಹೆಚ್ಚಿನ ಅಭಿರುಚಿ ನಿನಗಿರಲಿಲ್ಲ. ಹಲವು ಸಲ ನೀನು ಅವರೊಡನೆ ಮಾತನಾಡಲು ಕೂಡ ನಾಚಿಕೆಪಟ್ಟಿರಬಹುದು. ಅಥವಾ ನಿನ್ನ ಮರ್ಯಾದೆಗೆ ಅದು ಕಡಿಮೆಯದೆಂದು ತಿಳಿದಿರಬಹುದು. ಹುಡಿಗೆಯರ ಗೊಡವೆಗೆ ಹೋದರೂ ಅದು ಬರೇ ಅವರನ್ನು ಗೇಲಿ ಮಾಡುವದರ ಸಲುವಾಗಿಯಾಗಿ ಇದ್ದಿರಬಹುದು. ಆದರೆ ತರುಣಾವಸ್ಥೆಯಲ್ಲಿ ಈ ವಿಚಾರಗಳಲ್ಲಿ ತುಂಬಾ ವ್ಯತ್ಯಾಸವಾಗಿರುವದು ಕಂಡು ಬರುವದು. ಇಷ್ಟರವರೆಗೆ ಹುಡಿಗೆಯರನ್ನು ಕಂಡರೆ ಆಗದವನು ಇಂದು ಅವರೊಡನೆ ಮಾತನಾಡುವ ಹವ್ಯಾಸಕ್ಕೆ ಹೋಗುವಿ. ಎಲ್ಲಾ ಹುಡುಗಿಯರ ಸಹವಾಸ ಬೇಡವಾದರೂ ಪ್ರತ್ಯೇಕವಾಗಿ ಒಬ್ಬಳ ಸಹವಾಸ ನಿನಗೆ ಬೇಕಾಗಬಹುದು. ಅವಳ ಸ್ನೇಹವನ್ನು ಬೆಳೆಸುವ ಲವಲವಿಕೆಯು ನಿನ್ನನ್ನು ಕಾಡುವದು. ಅವಳ ಆಕರ್ಷಣೆಯಲ್ಲಿ ನಿನಗೇನೂ ಕೆಟ್ಟದಾಗಿ ಕಾಣುವದಿಲ್ಲ. ಅವಳ ಸೌಂದರ್ಯದಲ್ಲಿ ನೀನು ಮೈಮರೆತು ಹೋಗುವಿ. ಅವಳೊಡನೆ ಮಾತನಾಡಲು ನಿನಗೆ ತುಂಬಾ ಆಸೆ. ಅವಳ ಚಿತ್ರವನ್ನು ನೋಡಿದಷ್ಟೂ ಸಾಲದು.

ಆದರೆ ಈ ಎಲ್ಲಾ ವಿಷಯದ ಅನುಭವವಾದರೂ ಅವು ಸರ್ವಥಾ ಸರಿಯಲ್ಲವೆಂಬ ಭಾವನೆಯು ಆಗಾಗ ನಿನ್ನನ್ನು ತಡೆಯುವದು. ಭಾವೋದ್ರೇಕಗಳಿಗೆ ಅಡ್ಡಿಯಾಗುವದು. ಹಾಗಾದರೆ ಮೇಲೆ ಹೇಳಿದ ಅನುಭವಗಳ ಅರ್ಥವೇನು? ಅವುಗಳು ತರುಣಾವಸ್ಥೆಯಲ್ಲೇ ಬರಲು ಕಾರಣವೇನು? ಒಬ್ಬ ತರುಣನು ನಿಷ್ಕಪಟ ಹಾಗು ಪ್ರಾಮಾಣಿಕ ತರುಣನಾಗಿಯೇ ಉಳಿಯಬೇಕಾದರೆ ಏನು ಮಾಡಬೇಕು?

ಸ್ವಾಭಾವಿಕ ಮಾನುಷಿಕ ನಿಯಮವು ಹೀಗಿದೆ. ಮನುಷ್ಯನು ಎಂದಿಗೂ ಒಬ್ಬೊಂಟಿಗನಾಗಿ ಜೀವಿಸಲು ಬಯಸುವದಿಲ್ಲ. ಮನುಷ್ಯನು ಸಾಮಾಜಿಕವ್ಯಕ್ತಿ ಆದುದರಿಂದ ಅವನಿಗೆ ಬೇರೆ ಮನುಷ್ಯರ ಸಹವಾಸ, ಮಿತ್ರರ ಒಡನಾಟ, ಹಾಗೂ ಸಂಬಂಧಿಕರ ಪ್ರೇಮವು ಅಗತ್ಯ. ಪ್ರೇಮ ಇತರರಲ್ಲಿ ಸಂಪೂರ್ಣತೆಯನ್ನು ಪಡೆಯುವದು. ಈ ನಿಯಮವನ್ನು ನಿನ್ನ ದೈನಿಕ ಜೀವನದಲ್ಲಿ ನೀನು ಅನುಭವಿಸುವದಿಲ್ಲವೆ?

ಬಾಲ್ಯ ಜೀವನದಲ್ಲಿ ಕೂಡ— ಕಿಂಡರಗಾರ್ಟನ್ ವಿದ್ಯಾಲಯದಲ್ಲಿ ಕೂಡ, ಆ ಚಿಕ್ಕಮಗು ಒಬ್ಬಂಟಿಗನಾಗಿ ಆಡಬಯಸುವದಿಲ್ಲ. ಇತರರ ಸಂಗವು ಅದಕ್ಕೆ ಬೇಕು. ಸಂಗಾತಿಗಳು ಹುಡುಗರಾದರೂ ಸರಿ, ಹುಡುಗಿಯರಾದರೂ ಸರಿ, ಅದಕ್ಕೇನೂ ಅದರ ಮಹತ್ವವಿಲ್ಲ.

ಈ ನಡೆ–ನುಡಿಯು ಮಗುವು ಬಾಲ್ಯಾವಸ್ಥೆಯಿಂದ ತರುಣಾವಸ್ಥೆಗೆ ಬಂದಾಗ ಬದಲಾಗುವದು. ಈಗ ನಿನಗೆ ನಿನ್ನನ್ನು ಅರಿತುಕೊಳ್ಳುವ ನಿನಗೆ ನಂಬಿಕೆ ಇರುವ ಗೆಳೆಯನ ಅಗತ್ಯವೆನಿಸುವದು. ಈ ಗೆಳೆಯನು ನಿನ್ನೊಡನೆ ಆಡುವ ಇಲ್ಲವೆ ಶಾಲೆಗೆ ಹೋಗುವ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಆತ್ಮವಿಶ್ವಾಸವುಳ್ಳವನಾಗಿರಬೇಕು.

ನೀನು ನಿನ್ನ ಗುಟ್ಟಿನ ವಿಷಯಗಳನ್ನು ಅವನಿಗೆ ಹೇಳುವಿ. ನೀವಿಬ್ಬರೂ ಕೂಡಿ ನಾನಾ ಯೋಜನೆಗಳನ್ನು ಮಾಡುವಿರಿ. ನೀನು ಯಾವುದಾದರೂ ಒಂದು ಬಿಕ್ಕಟ್ಟಿನಲ್ಲಿ ಸಿಕ್ಕಿದ್ದರೆ, ಅವನು ನಿನಗೆ ಸಹಾಯ ಮಾಡುವನು. ದಿನಗಳೆದಂತೆ ನೀವಿಬ್ಬರೂ ಅನ್ಯೋನ್ಯರಾಗಿ ವರ್ತಿಸುವಿರಿ.

ಆದರೆ ಒಂದು ದಿನ ಈ ಗೆಳೆಯನ ಗೆಳೆತನ ಸಾಲದು, ಅದಕ್ಕಿಂತಲೂ ಹೆಚ್ಚಿನದು ಬೇಕು ಎಂಬ ಭಾವನೆಯು ನಿನ್ನಲ್ಲಿ ಉಂಟಾಗುವದು. ಅದು ಯಾರೊಡನೆ? ಅದೇ ಸಮಯಕ್ಕೆ ನಿನಗೊಬ್ಬ ತರುಣಿಯ ಭೆಟ್ಟಿಯಾಗುವದು. ಹಾಗಾದರೆ ನಾನೀಗ ಈ ಯುವತಿಯ ಸ್ನೇಹ ಬೆಳೆಸಲೇ? ಹುಡುಗಿಯ ಸಹವಾಸ ಮಾಡಲೇ?

ಈ ಪ್ರಶ್ನೆಗಳಿಗೆ ಯೋಗ್ಯ ಉತ್ತರ ಕೊಡುವ ಮೊದಲು ನಾನು ನಿನಗೆ ವಿವಾಹ ಜೀವನವನ್ನು ಕುರಿತು ಕೆಲವು ಮಾತುಗಳನ್ನು ಹೇಳಬೇಕಾಗಿದೆ. ದಾಂಪತ್ಯ ಜೀವನದ ಸ್ವಲ್ಪಾದರೂ ಅನುಭವವು ನಿನಗಾಗುವದು ನೆಟ್ಟಗೆ.

ಈ ಮೊದಲು ತಿಳಿಸಿದಂತೆ ಮನುಷ್ಯನಲ್ಲಿರುವ ಮೂರು ಲೈಂಗಿಕ ಪದರುಗಳಲ್ಲಿ (ಸಹಜ ಪ್ರವೃತ್ತಿಗಳಲ್ಲಿ) ದೈಹಿಕ-ಪಾಶವಿಕ ಪ್ರವೃತ್ತಿಯು ತರುಣಾವಸ್ಥೆಯಲ್ಲಿ ಯುವಕನಿಗೆ ತುಂಬಾ ತೊಂದರೆ ಕೊಡುವಂಥವುಗಳಾಗಿವೆ. ಆಧ್ಯಾತ್ಮಿಕ ಸಹಜ ಪ್ರವೃತ್ತಿಯು ಇನ್ನೊಬ್ಬ ವ್ಯಕ್ತಿಯನ್ನು ಪ್ರೀತಿಸಲು, ಮತ್ತು ಇನೊಬ್ಬನಿಂದ ಪ್ರೀತಿಸಲ್ಪಡಲು ಆಶಿಸುತ್ತದೆ. ಇದೇ ಪ್ರವೃತ್ತಿಯು ಸತಿ-ಪತಿಯರನ್ನು ದಾಂಪತ್ಯ ಜೀವನದ ಸದಾಕಾಲದ ಒಕ್ಕೂಟಕ್ಕೆ ತರುವದು.

ಮೂರನೆಯು ಸಹಜ ಪ್ರವೃತ್ತಿಯಾದ ಸಂತಾನಾಭಿವೃದ್ಧಿ-ಯನ್ನು ಮಾಡುವ ಅಭಿಲಾಷೆಯು ತಂದೆ-ತಾಯಿಯಾಗುವ ಮತ್ತು ಮಕ್ಕಳನ್ನು ಜನನ ಮಾಡುವ ಅಭಿಲಾಷೆಯು.

ಈ ಮೂರೂ ಸಹಜ ಪ್ರವೃತ್ತಿಗಳು ತಮ್ಮ ಸಂಪೂರ್ಣತೆಯನ್ನು ತಮ್ಮ ದಾಂಪತ್ಯ ಜೀವನದಲ್ಲಿ ಪಡೆಯಬೇಕು. ಇದು ದೈವೇಚ್ಛೆ.

ಆದುದರಿಂದ ನಿನ್ನ ಜೀವನದಲ್ಲಿ ಮುಖ್ಯವಾಗಿ ತರುಣಾವಸ್ಥೆಯಲ್ಲಿ ತರುಣಿಯರನ್ನು ನಿನ್ನ ಸಹೋದರಿಯರಂತೆ ನೋಡಲು ಪ್ರಯತ್ನಪಡು. ಪಾಶವಿಕ ದೃಷ್ಟಿಯಿಂದ ಅವರನ್ನು ಎಂದಿಗೂ ಕಾಣಬೇಡ. ಪ್ರತಿಯೊಬ್ಬ ಹುಡುಗಿಯು ನಿನ್ನ ಸಹೋದರಿಯಂತೆ. ಯಾವ ರೀತಿ ನೀನು ನಿನ್ನ ಸಹೋದರಿಯು ಕೆಟ್ಟ ವರ್ತನೆಗೆ ಇಳಿಯದಂತೆ ಜಾಗ್ರತೆ ವಹಿಸುವೆಯೋ ಅದೇ ರೀತಿ ಇತರ ಹುಡುಗಿಯರೂ ಒಳ್ಳೆಯ ಜೀವನವನ್ನು ನಡೆಸುವಂತೆ ನೀನು ಸಹಾಯಕನಾಗಬೇಕು. ಅವರನ್ನು ಕಡೆಗಣಿಸುವದೂ ಅಥವಾ ಅವರು ಸ್ವರ್ಗೀಯ ಜೀವಿಗಳೆಂದು ಭಾವಿಸುವದೂ ತಪ್ಪು. ಲಾಲಿತ್ಯ, ಸೂಕ್ಷ್ಮತೆ, ಹಾಗೂ ಸುಕುಮಾರತೆಯಿಂದ ಅವರೊಡನೆ ನಡೆದುಕೊಳ್ಳಬೇಕು.

ಎಂದಿಗೂ ಹುಡುಗಿಯರೊಡನೆ ಕ್ರೂರತನ ತೋರಿಸದಿರು. ವಿನಯಶೀಲತೆ ಹಾಗೂ ಕೋಮಲತೆಯಿಂದ ಅವರೊಡನೆ ವರ್ತಿಸು. ಅವರು ಅಬಲೆಯರೆಂದು ಮೊದಲು ತಿಳಿಯಬೇಕು. ದುರ್ಜನರಿಂದ ಅವರನ್ನು ರಕ್ಷಿಸುವದೂ ನಿನ್ನ ಕರ್ತವ್ಯವಾಗಿದೆ. ಕೆಲವು ಬಾರಿ ಕ್ಷುಲ್ಲಕ ಹುಡುಗಿಯರನ್ನು ಸರಿದಾರಿಗೆ ತರುವ ಹೊಣೆಗಾರಿಕೆಯು ನಿನ್ನದಾಗಲೂ ಬಹುದು. ಆಗ ನೀನು ತುಂಬಾ ಧೀರತನ ಹಾಗೂ

ವಿನಯದಿಂದ ವರ್ತಿಸಬೇಕು. ಹಲವು ಕ್ಷುದ್ರ ಹೃದಯದ ತರುಣಿಯರು ಮತ್ತು ಹೆಂಗಸರು ತಮ್ಮ ಸ್ವಗೌರವವನ್ನು ಕಳೆದುಕೊಂಡು, ದುಷ್ಟಪುರುಷ ಹಾಗೂ ತರುಣರಿಗೆ ತಮ್ಮನ್ನು ತಾವೇ ಮಾರಿಕೊಳ್ಳಬಹುದು. ದುರಾದೃಷ್ಟದಿಂದ ಅಂಥ ಪ್ರಲೋಭನೆಯು ನಿನಗೆ ಬಂದಿತೆಂದರೆ ಸ್ತ್ರೀಯರ ಗೌರವವನ್ನು ಕುರಿತು ಯೋಚಿಸು. ನಿನ್ನ ತಾಯಿ ಅಥವಾ ಸಹೋದರಿಯನ್ನು ನೆನೆಸು.

ನಿನ್ನ ವಾತ್ಸಲ್ಯ-ಒಲುಮೆಗಳನ್ನು ಸಿಕ್ಕಾಪಟ್ಟೆಯಾಗಿ ವ್ಯಯಗೊಳಿಸದಿರು. ಅವನ್ನು ಶೇಖರಿಸಿಡು. ಮುಂದೆ ಅವುಗಳಿಂದ ತುಂಬಾ ಪ್ರಯೋಜನವಿದೆ. ಇದರ ಅರ್ಥ ತಿಳಿಯಿತೇ? ಸಮತಟ್ಟಾದ ಬಯಲಿನಲ್ಲಿ ಹರಿಯುವ ತೊರೆಯೊಂದು ಏನೂ ಶಕ್ತಿ ಇಲ್ಲದವರಂತೆ ಕಾಣುವದು. ಆದರೆ ಅದೇ ನೀರನ್ನು ಒಂದು ಜಲಾಶಯದಲ್ಲಿ ಶೇಖರಿಸಿಟ್ಟು ಅಗತ್ಯ ಕಂಡಂತೆ ಕಾಲುವೆಗಳ ಮೂಲಕ ಹರಿಯಿಸಿದರೆ, ಅದರ ಶಕ್ತಿಯಾದರೂ ಏನು? ಯಂತ್ರ ಚಕ್ರವನ್ನೂ ಕೂಡ ಅದು ತಿರುಗಿಸುವದು. ವಿದ್ಯುಚ್ಛಕ್ತಿಯನ್ನು ಉತ್ಪಾದನೆ ಮಾಡುವದು. ಇದೇ ರೀತಿ ಪ್ರತಿಯೊಬ್ಬ ಪುರುಷನಲ್ಲಿಯೂ ನಡೆಯುವದು. ಕುಟುಂಬ ಜೀವನದ ಚಕ್ರವನ್ನು ಮುಂದಕ್ಕೆ ತಿರುಗಿಸಲು ನೆರವಾಗುವ ವಿಶೇಷ ಶಕ್ತಿಯೊಂದು ಆತನಲ್ಲಿ ಅಡಕವಾಗಿದೆ. ಅದನ್ನು ಅವನು ತರುಣಾವಸ್ಥೆಯಲ್ಲಿ ಜೋಪಾನ ಮಾಡಬೇಕು.

ಮನುಷ್ಯನ ವಾತ್ಸಲ್ಯವು ಅಪರಿಮಿತವಲ್ಲ. ಅದನ್ನು ಬಂಗಾರದ ತುಂಡಿಗೆ ಹೋಲಿಸಬಹುದು. ನೀನು ಬಂಗಾರವನ್ನು ಬೆಂಕಿಯಲ್ಲಿಟ್ಟು ಬೇಕಾದ ಬೆಲೆಯುಳ್ಳ ವಸ್ತುವನ್ನು ಸಿದ್ಧಪಡಿಸಿಕೊಳ್ಳಬಹುದು. ಅಥವಾ ಅದನ್ನು ಚಿಕ್ಕ ಚಿಕ್ಕ ನಾಣ್ಯಗಳನ್ನಾಗಿ ಮಾಡಿ

ಉಪಯೋಗಿಸಿಕೊಳ್ಳಬಹುದು. ತುಸು ದಿನಗಳಲ್ಲಿ ಇದೆಲ್ಲಾ ಹಾಳಾಗಿ ಹೋಗಬಹುದು. ಆಗ ನೀನು ಬರಿಗೈಯಾಗಬಹುದು. ದುಂಧುಗಾರಿಕೆಯನ್ನು ಮಾಡಿದರೆ ನೀನೇ ಹಾಳಾಗಿ ಹೋಗುವಿ.

ಒಂದು ದಿನ ಒಬ್ಬ ಸುಂದರ ಹುಡುಗಿಯನ್ನು ನೀನು ಕಾಣುವಿ. ಅವಳು ನಿನ್ನ ಅರ್ಧಾಂಗಿಯಾಗಲು ಯೋಗ್ಯಳೆಂದು ನೀನು ಭಾವಿಸುವಿ. ಯೋಗ್ಯವೆಂದು ಕಂಡರೆ ಅವಳನ್ನೇ ನೀನು ವಿವಾಹವಾಗಬಹುದು. ಆದರೆ ಹಲವು ಪಾಶವಿಕ ಯುವಕರು ವರ್ತಿಸುವಂತೆ ಆ ಸುಂದರ ಹುಡುಗಿಯನ್ನು ನೀನು ಕೆಟ್ಟ ದಾರಿಗೆಳೆದರೆ ಮಹಾ ಪಾಪಕಾರ್ಯವನ್ನು ನೀನು ಮಾಡಿದಂತಾಗುವದು. ಮುಂದೆ ನಿನ್ನ ಸತಿಯಾಗುವ ತರುಣಿಯು ಬೇರೆ ಯುವಕರ ಜೊತೆಗೆ ಸೇರಿ ಕೆಟ್ಟ ವರ್ತನೆಗೆ ಇಳಿಯುವದನ್ನು ನೀನು ಸಹಿಸುವೆಯಾ? ನವಯುವಕನೆ, ಈ ಎಲ್ಲಾ ಬುದ್ಧಿಯ ಮಾತುಗಳನ್ನು ಕೇಳಿದ ಮೇಲೂ ನಿನ್ನನ್ನು ನೀನೇ ಸಂಯಮದಲ್ಲಿ ಇಟ್ಟುಕೊಳ್ಳಲು ಅಸಾಧ್ಯವಾದರೆ ದೇವರನ್ನು ಹೃದಯಾಂತರಾಳದಿಂದ ಪ್ರಾರ್ಥಿಸುವದು ಲೇಸು. ಹತ್ತಿರದ ದೇವಾಲಯಕ್ಕೆ ಹೋಗಿ ಪ್ರಾರ್ಥಿಸು. ಹೇಗೆ ನೀನು ನಿನ್ನ ಅರ್ಧಾಂಗಿಯಾಗಲಿರುವ ಆ ಸುಂದರ ಹುಡುಗಿಯು ವಿವಾಹವಾಗುವ ವರೆಗೆ ಪರಿಶುದ್ಧವಾಗಿರಬೇಕೆಂದು ಬಯಸುವೆಯೋ ಅದೇ ರೀತಿ, ನೀನೂ, ಕಂಡ ಇತರ ಹುಡುಗಿಯರನ್ನು ನಿಷ್ಕಳಂಕವಾಗಿಡಲು ಸರ್ವೇಶ್ವರನು ಸಹಾಯವಾಗುವಂತೆ ಬೇಡಿಕೋ. ಆಗ ನಿಮ್ಮಿಬ್ಬರ ವಿವಾಹದ ದಿನ ನೀನು ಹೆಮ್ಮೆಯಿಂದ ನಿನ್ನ ಸತಿಯೊಡನೆ ಹೀಗೆನ್ನಬಹುದು—

“ನಾನು ಬಾಲಕನಾಗಿರುವಾಗ ನಿನಗಾಗಿ ದೇವರಲ್ಲಿ ಬೇಡಿಕೊಂಡಿದ್ದೆನು”